| ಭಾಗ - III | ಬೆಂಗಳೂರು, ಬುಧವಾರ, ಜುಲೈ ೧೪, ೨೦೧೦ (ಆಷಾಢ ೨೩, ಶಕ ವರ್ಷ ೧೯೩೨) | ನಂ. ೮೧೦ |
|---|---|---|

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ಪ್ರಪತ್ರ – 2**

**(12(2)ನೇ ನಿಯಮವನ್ನು ನೋಡಿ)**

**(ಗ್ರಾಮ ಪಂಚಾಯತಿಗಳಿಗೆ ಚುನಾವಣೆಗಳ ಸಂದರ್ಭದಲ್ಲಿ ಉಪಯೋಗಕ್ಕಾಗಿ)**

**–: ಅಧಿಸೂಚನೆ :–**

**ಸಂ.ಇಎಲ್‌ಎನ್(2)ಸಿಆರ್/36/2010–11, ದಿನಾಂಕ 14/07/2010**

(1) 1993 ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಉಪಬಂಧಗಳ ಮೇರೆಗೆ ಕೋಲಾರ ಜಿಲ್ಲೆಗೆ ಸಂಬಂಧಿಸಿದಂತೆ, ಈ ಅಧಿಸೂಚನೆಗೆ ಲಗತ್ತಿಸಿರುವ ತ:ಖ್ತೆಯಲ್ಲಿ ನಮೂದಿಸಿರುವಂತೆ ಜಿಲ್ಲೆಯಲ್ಲಿ ವಿವಿಧ ಕಾರಣಗಳಿಂದ ತೆರವಾಗಿರುವ ಗ್ರಾಮ ಪಂಚಾಯಿತಿಯ ವಿವಿಧ ಕ್ಷೇತ್ರಗಳ ಸದಸ್ಯ ಸ್ಥಾನಗಳನ್ನು ತುಂಬಲು

(3) ಕೋಲಾರ ಜಿಲ್ಲೆಯ ಬಂಗಾರಪೇಟೆ ತಾಲ್ಲೂಕಿನ ಘಟ್ಟಕಾಮದೇನಹಳ್ಳಿ ಗ್ರಾಮ ಪಂಚಾಯ್ತಿಯಲ್ಲಿ ಶ್ರೀ.ಆಸೈತಂಬಿ, ಸದಸ್ಯರು ಮತ್ತು ಶ್ರೀನಿವಾಸಪುರ ತಾಲ್ಲೂಕಿನ ಲಕ್ಷ್ಮೀಪುರ ಗ್ರಾಮ ಪಂಚಾಯ್ತಿಯಲ್ಲಿ ಶ್ರೀ.ಸಿ.ವೆಂಕಟೇಶಪ್ಪ, ಸದಸ್ಯರು ಇವರಿಬ್ಬರ ಮರಣದಿಂದ ಹಾಗೂ ಬಂಗಾರಪೇಟೆ ತಾಲ್ಲೂಕಿನ ದೊಡ್ಡೂರು ಕರಪನಹಳ್ಳಿ ಗ್ರಾಮ ಪಂಚಾಯ್ತಿಯ ದೊಡ್ಡೂರು ಕರಪನಹಳ್ಳಿ ಪ್ಲಾಂಟೇಷನ್–1 ಮತ್ತು 2 ಕ್ಷೇತ್ರಗಳಲ್ಲಿ ಚುನಾವಣೆಯನ್ನು ಬಹಿಷ್ಕರಿಸಿದ್ದ ಕಾರಣ ತೆರವಾಗಿರುವ ಸದಸ್ಯ ಸ್ಥಾನಗಳನ್ನು ತುಂಬಲು, ಚುನಾವಣೆಗಳನ್ನು ನಡೆಸಬೇಕಾಗಿರುವುದರಿಂದ,

ಆದುದರಿಂದ, ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗಳನ್ನು ನಡೆಸುವ) ನಿಯಮಗಳು 1993 ರ 12ನೇ ನಿಯಮಕ್ಕನುಸಾರವಾಗಿ ಕೋಲಾರ ಜಿಲ್ಲೆಯ ಡೆಪ್ಯುಟಿ ಕಮೀಷನರ್‌ರಾದ ಎನ್.ಪ್ರಭಾಕರ್, ಭಾ.ಆ.ಸೇ. ಎಂಬ ಹೆಸರಿನ ನಾನು, ಸದರಿ ಚುನಾವಣೆಗೆ ಸಂಬಂಧಿಸಿದ ಈ ಕೆಳಕಂಡ ಕಾರ್ಯಕ್ರಮ ವೇಳಾ ಪಟ್ಟಿಯನ್ನು ಈ ಮೂಲಕ ನಿಗಧಿಪಡಿಸುತ್ತೇನೆ.

**–: ಚುನಾವಣಾ ವೇಳಾ ಪಟ್ಟಿ :–**

| | | |
|---|---|---|
| (ಎ) ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | : | 21–07–2010 (ಬುಧವಾರ) |
| (ಬಿ) ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ. | : | 22–07–2010 (ಗುರುವಾರ) |
| (ಸಿ) ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳುವ ಕೊನೆಯ ದಿನಾಂಕ ಮತ್ತು ದಿನ. | : | 24–07–2010 (ಶನಿವಾರ) |
| (ಡಿ) ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ ಮತ್ತು ಮತದಾನ ಸಮಯ | : | 01–08–2010 (ಭಾನುವಾರ) ಬೆಳಿಗ್ಗೆ 7–00 ಗಂಟೆಯಿಂದ ಸಂಜೆ 5–00 ಗಂಟೆಯವರೆಗೆ |
| (ಇ) ಮತಗಳ ಎಣಿಕೆ ದಿನಾಂಕ, ದಿನ, ಸ್ಥಳ ಮತ್ತು ಸಮಯ | : | 04–08–2010 (ಬುಧವಾರ) ಬೆಳಿಗ್ಗೆ 8–00 ಗಂಟೆಯಿಂದ ಆಯಾ ತಾಲ್ಲೂಕಿನ ಕೇಂದ್ರಸ್ಥಾನದಲ್ಲಿ |
| (ಎಫ್) ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯ ಗೊಳಿಸಬೇಕೋ ಆ ದಿನಾಂಕ ಮತ್ತು ದಿನ. | : | 05–08–2010 (ಗುರುವಾರ) |

(ಎನ್.ಪ್ರಭಾಕರ್)
ಜಿಲ್ಲಾಧಿಕಾರಿಗಳು
ಕೋಲಾರ ಜಿಲ್ಲೆ

**ತ:ಖ್ತೆ**

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ಸಂ.ಇಎಲ್‌ಎನ್(2)ಸಿಆರ್/36/2010–11 ದಿನಾಂಕ 14/07/2010**

ಕೋಲಾರ ಜಿಲ್ಲೆಯ ಈ ಕೆಳಕಂಡ ತಾಲ್ಲೂಕುಗಳ ಗ್ರಾಮ ಪಂಚಾಯತಿಗಳಲ್ಲಿ ವಿವಿಧ ಕಾರಣಗಳಿಂದ ತೆರವಾಗಿರುವ ಗ್ರಾಮ ಪಂಚಾಯತಿ ಸದಸ್ಯ ಸ್ಥಾನಗಳಿಗೆ ಚುನಾವಣೆಯನ್ನು ನಡೆಸಲು ವೇಳಾ ಪಟ್ಟಿಯನ್ನು ನಿಗಧಿಪಡಿಸಿದೆ.

| ಕ್ರ. ಸಂ. | ತಾಲ್ಲೂಕಿನ ಹೆಸರು | ಗ್ರಾಮ ಪಂಚಾಯತಿಯ ಹೆಸರು | ಪ್ರಾದೇಶಿಕ ಚುನಾವಣಾ ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಸ್ಥಾನಗಳ ಸಂಖ್ಯೆ | ಸದಸ್ಯ ಸ್ಥಾನ ತೆರವಾಗಲು ಕಾರಣ | ಮೀಸಲಾತಿ ವಿವರ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಬಂಗಾರಪೇಟೆ | 12–ಘಟ್ಟಕಾಮದೇನಹಳ್ಳಿ | 4– ಕೃಷ್ಣರಾಜಪುರ | 1(ಒಂದು) | ಸದಸ್ಯರ ಮರಣದಿಂದ | ಪರಿಶಿಷ್ಟ ಜಾತಿ |
| | | 13–ದೊಡ್ಡೂರು ಕರಪನಹಳ್ಳಿ | 3– ದೊಡ್ಡೂರು ಕರಪನಹಳ್ಳಿ ಪ್ಲಾಂಟೇಷನ್–1 | 1(ಒಂದು) | ಚುನಾವಣೆ ಬಹಿಷ್ಕಾರ | ಪರಿಶಿಷ್ಟ ಜಾತಿ |
| | | | | 1(ಒಂದು) | – “ – | ಪ.ಪಂಗಡ (ಮ) |
| | | | | 1(ಒಂದು) | – “ – | ಹಿಂ.ವ. “ಅ” |
| | | | | 1(ಒಂದು) | – “ – | ಸಾಮಾನ್ಯ |
| | | | | 1(ಒಂದು) | – “ – | ಸಾಮಾನ್ಯ (ಮ) |
| | | | | ಒಟ್ಟು 5 ಸ್ಥಾನಗಳು | | |
| | | | 4– ದೊಡ್ಡೂರು ಕರಪನಹಳ್ಳಿ ಪ್ಲಾಂಟೇಷನ್–2 | 1(ಒಂದು) | ಚುನಾವಣೆ ಬಹಿಷ್ಕಾರ | ಪರಿಶಿಷ್ಟ ಜಾತಿ (ಮ) |
| | | | | 1(ಒಂದು) | – “ – | ಹಿಂ.ವ. “ಅ” |
| | | | | 1(ಒಂದು) | – “ – | ಹಿಂ.ವ. “ಬ” |
| | | | | 1(ಒಂದು) | – “ – | ಸಾಮಾನ್ಯ |
| | | | | ಒಟ್ಟು 4 ಸ್ಥಾನಗಳು | | |
| 2 | ಶ್ರೀನಿವಾಸಪುರ | 11–ಲಕ್ಷ್ಮೀಪುರ | 3–ಕೊಂಡಸಂದ್ರ | 1(ಒಂದು) | ಸದಸ್ಯರ ಮರಣದಿಂದ | ಹಿಂ.ವ. “ಅ” |

(ಎನ್.ಪ್ರಭಾಕರ್)
ಜಿಲ್ಲಾಧಿಕಾರಿಗಳು
ಕೋಲಾರ ಜಿಲ್ಲೆ

,


**ವಿಶೇಷ ಪತ್ರಿಕೆ**

| ಭಾಗ – III | ಬೆಂಗಳೂರು, ಬುಧವಾರ, ಜುಲೈ ೧೪, ೨೦೧೦ (ಆಷಾಢ ೨೩, ಶಕ ವರ್ಷ ೧೯೩೨) | ನಂ. ೮೧೧ |
|---|---|---|


**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಪ್ರಪತ್ರ–2**

**(12(2)ನೇ ನಿಯಮವನ್ನು ನೋಡಿ)**

**(ಗ್ರಾಮ ಪಂಚಾಯತಿಗಳಿಗೆ ಚುನಾವಣೆಗಳ ಸಂದರ್ಭದಲ್ಲಿ ಉಪಯೋಗಿಸುವುದಕ್ಕಾಗಿ)**

**ಅಧಿಸೂಚನೆ**

**ನಂ. ಚು(4)ಸಿಆರ್ 33/09–10, ದಿನಾಂಕ 14ನೇ ಜುಲೈ 2010.**

1993ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಉಪಬಂಧಗಳ ಮೇರೆಗೆ ಶಿವಮೊಗ್ಗ ಜಿಲ್ಲೆಗೆ ಸಂಬಂಧಿಸಿದಂತೆ ಸದರಿ ಅಧಿಸೂಚನೆಗೆ ಲಗತ್ತಿಸಿದ ಕೋಷ್ಟಕದಲ್ಲಿ ತೋರಿಸಿರುವಂತೆ ವಿವಿಧ ಗ್ರಾಮ ಪಂಚಾಯತಿಗಳ ವಿವಿಧ ಕ್ಷೇತ್ರಗಳಲ್ಲಿ ಖಾಲಿ ಇರುವ ಗ್ರಾಮ ಪಂಚಾಯತಿ ಸದಸ್ಯರ ಖಾಲಿ ಸ್ಥಾನಗಳನ್ನು ತುಂಬಲು ಚುನಾವಣೆಗಳನ್ನು ನಡೆಸಬೇಕಾಗಿರುತ್ತದೆ.

ಆದುದರಿಂದ, ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗಳನ್ನು ನಡೆಸುವ) ನಿಯಮಗಳು 1993ರ 12ನೇ ನಿಯಮಕ್ಕನುಸಾರವಾಗಿ, ಶಿವಮೊಗ್ಗ ಜಿಲ್ಲೆಯ ಡೆಪ್ಯುಟಿ ಕಮೀಷನರ್‌ರಾದ ಎ.ಬಿ. **ಹೇಮಚಂದ್ರ** ಎಂಬ ಹೆಸರಿನ ನಾನು ಸದರಿ ಚುನಾವಣೆಗೆ ಸಂಬಂಧಿಸಿದ ಈ ಕೆಳಕಂಡ ಕಾರ್ಯಕ್ರಮ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸುತ್ತೇನೆ.

| | | |
|---|---|---|
| ಎ | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 21–07–2010 (ಬುಧವಾರ) |

| | | |
|---|---|---|
| ಬಿ | ನಾಮಪತ್ರಗಳ ಪರಿಶೀಲನೆಯ ದಿನಾಂಕ | 22–07–2010 (ಗುರುವಾರ) |
| ಸಿ. | ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ | 24–07–2010 (ಶನಿವಾರ) |
| ಡಿ. | ಮತದಾನದ ಅವಶ್ಯವಿದ್ದರೆ, ಮತದಾನ ನಡೆಸುವ ದಿನಾಂಕ | 01–08–2010 (ಭಾನುವಾರ) |
| (ಮತದಾನದ ವೇಳೆಃ ಬೆಳಿಗ್ಗೆ 7–00 ಗಂಟೆಯಿಂದ ಸಾಯಂಕಾಲ 5–00 ಗಂಟೆಯವರೆಗೆ) | | |
| ಇ | ಮತಗಳ ಎಣಿಕೆ ದಿನಾಂಕ<br>ಬೆಳಿಗ್ಗೆ 8–00 ಘಂಟೆಯಿಂದ ತಾಲ್ಲೂಕಿನ ಕೇಂದ್ರಸ್ಥಳದಲ್ಲಿ) | 04–08–2010 (ಬುಧವಾರ) |
| ಎಫ್ | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ | 05–08–2010 (ಗುರುವಾರ) |

**ಎ.ಬಿ. ಹೇಮಚಂದ್ರ**
ಜಿಲ್ಲಾಧಿಕಾರಿ
ಶಿವಮೊಗ್ಗ ಜಿಲ್ಲೆ ಶಿವಮೊಗ್ಗ

**ಜಿಲ್ಲಾಧಿಕಾರಿಗಳು, ಶಿವಮೊಗ್ಗ ಇವರ ಅಧಿಸೂಚನೆ ನಂ. ಚು(4)ಸಿಆರ್ 33/09–10**
**ದಿನಾಂಕ 14ನೇ ಜುಲೈ 2010ರ ಅಧಿಸೂಚನೆಗೆ ಲಗತ್ತು ಕೋಷ್ಟಕ**

*****

**ಶಿವಮೊಗ್ಗ ಜಿಲ್ಲೆಯಲ್ಲಿನ ಗ್ರಾಮ ಪಂಚಾಯತಿಗಳ ಉಪಚುನಾವಣೆ ನಡೆಯಲಿರುವ ಸ್ಥಾನಗಳ ವಿವರ**

| ಕ್ರಮ ಸಂಖ್ಯೆ | ಗ್ರಾಮ ಪಂಚಾಯತಿಯ ಹೆಸರು | ಕ್ಷೇತ್ರದ ಹೆಸರು | ಖಾಲಿ ಇರುವ ಸದಸ್ಯ ಸ್ಥಾನದ ವರ್ಗ | ಸ್ಥಾನ ತೆರವಾಗಿರುವ ಬಗ್ಗೆ ಕಾರಣ | ಸಂಖ್ಯೆ |
|---|---|---|---|---|---|
| **ತಾಲ್ಲೂಕಿನ ಹೆಸರುಃ ಶಿವಮೊಗ್ಗ** | | | | | |
| 1 | ಹಾಡೋನಹಳ್ಳಿ | 2. ಮಡಿಕೆಚೀಲೂರು | ಅನುಸೂಚಿತ ಪಂಗಡ ಮಹಿಳೆ | ನಾಮಪತ್ರ ಸಲ್ಲಿಕೆ ಇಲ್ಲ | 1 |
| 2 | ಮೇಲಿನಹನಸವಾಡಿ | 1–ಗೊಂದಿಚಟ್ನಹಳ್ಳಿ | ಹಿಂದುಳಿದ ವರ್ಗ ಅ | ನಾಮಪತ್ರ ಸಲ್ಲಿಕೆ ಇಲ್ಲ | 1 |
| **ತಾಲ್ಲೂಕಿನ ಹೆಸರುಃ ಭದ್ರಾವತಿ** | | | | | |
| 1 | ತಡಸ | 2–ತಡಸ | ಅನುಸೂಚಿತ ಪಂಗಡ ಮಹಿಳೆ | ನಾಮಪತ್ರ ಸಲ್ಲಿಕೆ ಇಲ್ಲ | 1 |
| 2 | ಕಂಬದಾಳ್ ಹೊಸೂರು | ಹುಣಸೇಕಟ್ಟೆ–1 | ಅನುಸೂಚಿತ ಜಾತಿ | ಮತದಾನ ಬಹಿಷ್ಕಾರ | 1 |
| | | ಹುಣಸೇಕಟ್ಟೆ–1 | ಹಿಂದುಳಿದ ವರ್ಗ ಅ ಮಹಿಳೆ | ಮತದಾನ ಬಹಿಷ್ಕಾರ | 1 |
| | | ಹುಣಸೇಕಟ್ಟೆ–1 | ಸಾಮಾನ್ಯ | ಮತದಾನ ಬಹಿಷ್ಕಾರ | 2 |
| | | ಹುಣಸೇಕಟ್ಟೆ–1 | ಸಾಮಾನ್ಯ (ಮಹಿಳೆ) | ಮತದಾನ ಬಹಿಷ್ಕಾರ | 1 |
| | | ಹುಣಸೇಕಟ್ಟೆ–2 | ಅನುಸೂಚಿತ ಪಂಗಡ ಮಹಿಳೆ | ಮತದಾನ ಬಹಿಷ್ಕಾರ | 1 |
| **ತಾಲ್ಲೂಕಿನ ಹೆಸರುಃ ಸಾಗರ** | | | | | |
| 1 | ಗೌತಮಪುರ | ಗೌತಮಪುರ | ಅನುಸೂಚಿತ ಪಂಗಡ ಮಹಿಳೆ | ನಾಮಪತ್ರ ಸಲ್ಲಿಕೆ ಇಲ್ಲ | 1 |
| | | | | ಜುಮ್ಲಾಃ | **10** |

**ಎ.ಬಿ. ಹೇಮಚಂದ್ರ**
ಜಿಲ್ಲಾಧಿಕಾರಿ
ಶಿವಮೊಗ್ಗ ಜಿಲ್ಲೆ ಶಿವಮೊಗ್ಗ

**ಜಿಲ್ಲಾಧಿಕಾರಿಯವರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ.**

**ಪ್ರಪತ್ರ-2**

[12(2) ನೇ ನಿಯಮವನ್ನು ನೋಡಿ]

**ಅಧಿಸೂಚನೆ**

**ಸಂಖ್ಯೆ:ಇಎಲ್ಎನ್(ಪಂ).ಸಿಆರ್.32/2010-11, ದಿನಾಂಕ: 14-07-2010**

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಉಪಬಂಧಗಳ ಮೇರೆಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಸಂಬಂಧಿಸಿದಂತೆ ಗ್ರಾಮ ಪಂಚಾಯತಿಗಳಲ್ಲಿ ನಾಮಪತ್ರ ಸಲ್ಲಿಸಧೆ ಇರುವ ಹಾಗೂ ನಾಮಪತ್ರಗಳನ್ನು ಹಿಂಪಡೆದುಕೊಂಡಿರುವ ಕಾರಣಗಳಿಂದ ಈ ಕೆಳಕಾಣಿಸಿದ ಗ್ರಾಮ ಪಂಚಾಯಿತಿ ಕ್ಷೇತ್ರಗಳಲ್ಲಿ ಸದಸ್ಯರ ಸ್ಥಾನಗಳು ಖಾಲಿ ಇರುವುದಾಗಿ ಘೋಷಿಸಿರುವುದರಿಂದ ಉಂಟಾದ ಖಾಲಿ ಸ್ಥಾನಗಳನ್ನು ತುಂಬಲು ಚುನಾವಣೆಯನ್ನು ನಡೆಸಬೇಕಾಗಿರುವುದರಿಂದ:-

| ಕ್ರ. ಸಂ. | ತಾಲ್ಲೂಕು | ಗ್ರಾಮ ಪಂಚಾಯಿತಿ ಹೆಸರು | ಕ್ಷೇತ್ರದ ಹೆಸರು | ಖಾಲಿ ಇರುವ ಸದಸ್ಯ ಸ್ಥಾನಗಳ ಸಂಖ್ಯೆ | ಮೀಸಲಾತಿ ವಿವರ | ಸದಸ್ಯ ಸ್ಥಾನ ತೆರವಾಗಲು ಕಾರಣ |
|---|---|---|---|---|---|---|
| 1 | ಹೊಸಕೋಟೆ | ಅನುಗೊಂಡನಹಳ್ಳಿ | 4-ಮುತ್ಕೂರು | 1 | ಪ.ಪಂ(ಮ) | ನಾಮಪತ್ರ ಹಿಂಪಡೆದಿರುವುದರಿಂದ |
| 2 | ನೆಲಮಂಗಲ | ಹೊನ್ನೇನಹಳ್ಳಿ | 4-ವೀರಸಾಗರ | 1 | ಪ.ಜಾ | ನಾಮಪತ್ರ ಸಲ್ಲಿಸದೇ ಇರುವುದರಿಂದ |

ಕರ್ನಾಟಕ ಪಂಚಾಯತ್‌ರಾಜ್ (ಚುನಾವಣೆಯನ್ನು ನಡೆಸುವ) ನಿಯಮಗಳು 1993ರ ನಿಯಮ 12(2)ರ ಅನುಸಾರವಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾಧಿಕಾರಿ ಶ್ರೀ.ಆರ್.ಕೆ.ರಾಜು, ಭಾ.ಆ.ಸೇ ಆದ ನಾನು ಸದರಿ ಗ್ರಾಮ ಪಂಚಾಯಿತಿಗಳ ಕ್ಷೇತ್ರಗಳ ಚುನಾವಣೆಗೆ ಸಂಬಂಧಿಸಿದಂತೆ ಈ ಕೆಳಕಾಣಿಸಿದ ಚುನಾವಣಾ ವೇಳಾಪಟ್ಟಿಯನ್ನು ರಾಜ್ಯ ಚುನಾವಣಾ ಆಯೋಗದ ಆದೇಶ ಸಂ.ರಾಚುಆ.282.ಇಜಿಪಿ.2010, ದಿನಾಂಕ: 28-06-2010 ರಂತೆ ಈ ಮೂಲಕ ನಿಗದಿಪಡಿಸುತ್ತೇನೆ.

| | | |
|---|---|---|
| 1 | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 21-07-2010 (ಬುಧವಾರ) |
| 2 | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 22-07-2010 (ಗುರುವಾರ) |
| 3 | ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 24-07-2010 (ಶನಿವಾರ) |
| 4 | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ (ಮತದಾನದ ಅವಧಿ ಬೆಳಗ್ಗೆ 7.00 ಗಂಟೆಯಿಂದ ಸಂಜೆ 5.00 ಗಂಟೆಯವರೆಗೆ) | 01-08-2010 (ಭಾನುವಾರ) |
| 5 | ಮರು ಮತದಾನ ಅವಶ್ಯವಿದ್ದರೆ ಮರು ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 03-08-2010 (ಮಂಗಳವಾರ) |
| 6 | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೊ ಆ ದಿನಾಂಕ ಮತ್ತು ದಿನ | 05-08-2010 (ಗುರುವಾರ) |
| 7 | ಮತಗಳ ಎಣಿಕೆ ದಿನಾಂಕ ಮತ್ತು ದಿನ (ಬೆಳಗ್ಗೆ 8.00 ಗಂಟೆಯಿಂದ ಪ್ರಾರಂಭವಾಗಿ ಮತ ಎಣಿಕೆ ಮುಗಿಯುವವರೆಗೆ ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | 04-08-2010 (ಬುಧವಾರ) |

**ಆರ್.ಕೆ.ರಾಜು**

ದಿನಾಂಕ: 14-07-2010
ಸ್ಥಳ : ಬೆಂಗಳೂರು

ಜಿಲ್ಲಾಧಿಕಾರಿ ಮತ್ತು ಜಿಲ್ಲಾ ಚುನಾವಣಾಧಿಕಾರಿ,
ಬೆಂಗಳೂರು ಗ್ರಾಮಾಂತರ ಜಿಲ್ಲೆ.

| ಭಾಗ – IV-A | ಬೆಂಗಳೂರು, ಬುಧವಾರ, ಜುಲೈ ೧೪, ೨೦೧೦ (ಆಷಾಢ ೨೩, ಶಕ ವರ್ಷ ೧೯೩೨) | ನಂ. ೮೧೩ |
|---|---|---|

**ನಗರಾಭಿವೃದ್ಧಿ ಸಚಿವಾಲಯ**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ : ನಅಇ 131 ಎಂಎಲ್ಆರ್ 2010, ಬೆಂಗಳೂರು, ದಿನಾಂಕ : 13ನೇ ಜುಲೈ, 2010**

ಸರ್ಕಾರದ ಅಧಿಸೂಚನೆ ಸಂಖ್ಯೆ : ನಅಇ 182 ಎಂಎಲ್ಆರ್ 2007(7) ದಿನಾಂಕ: 29.10.2007ರ ಕ್ರಮ ಸಂಖ್ಯೆ : 37ರಲ್ಲಿ ಮೈಸೂರು ಮಹಾನಗರಪಾಲಿಕೆಗೆ ಚುನಾಯಿತರಾದ ಅಭ್ಯರ್ಥಿಯ ಹೆಸರನ್ನು ಪ್ರಕಟಿಸಿದ್ದು ಅದನ್ನು ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳುವುದು

| ಕ್ರ. ಸಂ. | ವಾರ್ಡ್ ನಂಬರ್ | ಆಯ್ಕೆಯಾದ ಅಭ್ಯರ್ಥಿಯ ಹೆಸರು ಮತ್ತು ವಿಳಾಸ (ಶ್ರೀ/ಶ್ರೀಮತಿ) | ಪ್ರವರ್ಗ | ಪಕ್ಷದ ಹೆಸರು |
|---|---|---|---|---|
| 37. | 37 | ಪುಷ್ಪಲತಾ ಜಗನ್ನಾಥ್, ಕೋಂ ಜಗನ್ನಾಥ್, ನಂ. 459, ಒಕ್ಕಲಗೇರಿ, ದೇವರಾಜ ಮೊಹಲ್ಲಾ, ಮೈಸೂರು | ಸಾಮಾನ್ಯ (ಮಹಿಳೆ) | ಪಕ್ಷೇತರ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಆರ್. ರವೀಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ವಿಶೇಷ ಪತ್ರಿಕೆ**

| ಭಾಗ – I | ಬೆಂಗಳೂರು, ಬುಧವಾರ, ಜುಲೈ ೧೪, ೨೦೧೦ (ಆಷಾಢ ೨೩, ಶಕ ವರ್ಷ ೧೯೩೨) | ನಂ. ೮೧೪ |
|---|---|---|

**ಕರ್ನಾಟಕ ಸರ್ಕಾರದ ನಡವಳಿಗಳು**

**ಅಲ್ಪಸಂಖ್ಯಾತರ ಕಲ್ಯಾಣ ಸಚಿವಾಲಯ**

**ವಿಷಯ** ಶ್ರೀ ಎಂ.ಎ. ಸಲೀಂ, ಐ.ಪಿ.ಎಸ್. ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರಸ್ಥಾನ–1, ಡಿ.ಜಿ. ಮತ್ತು ಐ.ಜಿ.ಪಿ. ಕಛೇರಿ, ಬೆಂಗಳೂರು ಇವರನ್ನು ಕರ್ನಾಟಕ ರಾಜ್ಯ ವಕ್ಫ್ ಮಂಡಳಿಯ ಆಡಳಿತಾಧಿಕಾರಿಯಾಗಿ ಮುಂದುವರೆಸುವ ಬಗ್ಗೆ ಆದೇಶ.

**ಓದಲಾಗಿದೆ** 1) ಸರ್ಕಾರದ ಆದೇಶ ಸಂಖ್ಯೆ : MWD 193 WES 2009, ದಿ: 16–1–2010.

2) ಕರ್ನಾಟಕ ರಾಜ್ಯ ವಕ್ಫ್ ಮಂಡಳಿಯ ಪತ್ರ ಸಂಖ್ಯೆ : KSBW/ADM/CR07/2010-11 ದಿನಾಂಕ:1–7–2010.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯ ವಕ್ಫ್ ಮಂಡಳಿಯನ್ನು ರದ್ದುಗೊಳಿಸಿ, ಶ್ರೀ ಎಂ.ಎ.ಸಲೀಂ, ಐ.ಪಿ.ಎಸ್. ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೋಲೀಸ್, ಕೇಂದ್ರಸ್ಥಾನ–1, ಡಿ.ಜಿ. ಮತ್ತು ಐ.ಜಿ.ಪಿ. ಕಛೇರಿ, ಬೆಂಗಳೂರು ಇವರನ್ನು ಕರ್ನಾಟಕ ರಾಜ್ಯ ವಕ್ಫ್ ಮಂಡಳಿಯ ಆಡಳಿತಾಧಿಕಾರಿಯಾಗಿ 6 ತಿಂಗಳ ಅವಧಿಗೆ ನೇಮಿಸಲಾಗಿರುತ್ತದೆ.

ಮೇಲೆ ಓದಲಾದ (2)ರ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಕರ್ನಾಟಕ ರಾಜ್ಯ ವಕ್ಫ್ ಮಂಡಳಿ, ರವರ ಪತ್ರದಲ್ಲಿ ಓದಲಾದ (1)ರ ಸರ್ಕಾರಿ ಆದೇಶದನ್ವಯ ಶ್ರೀ ಎಂ.ಎ. ಸಲೀಂ ರವರು ಕರ್ನಾಟಕ ರಾಜ್ಯ ವಕ್ಫ್ ಮಂಡಳಿಯ ಆಡಳಿತಾಧಿಕಾರಿಯ ಪ್ರಭಾರವನ್ನು ದಿನಾಂಕ: 16–1–2010 ರಂದು ವಹಿಸಿಕೊಂಡಿದ್ದು, ಅವರ ಸೇವಾವಧಿಯು ದಿನಾಂಕ:15–7–2010ಕ್ಕೆ ಮುಕ್ತಾಯವಾಗುವ ಹಿನ್ನೆಲೆಯಲ್ಲಿ ಸೂಕ್ತ ಸರ್ಕಾರದ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಕರ್ನಾಟಕ ರಾಜ್ಯ ವಕ್ಫ್ ಮಂಡಳಿಯ ರದ್ದತಿಯನ್ನು ಮುಂದುವರಿಸಿ, ಶ್ರೀ ಎಂ.ಎ.ಸಲೀಂ, ಐ.ಪಿ.ಎಸ್. ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೋಲೀಸ್, ಕೇಂದ್ರಸ್ಥಾನ–1, ಡಿ.ಜಿ. ಮತ್ತು ಐ.ಜಿ.ಪಿ. ಕಛೇರಿ, ಬೆಂಗಳೂರು ಇವರನ್ನು ಕರ್ನಾಟಕ ರಾಜ್ಯ ವಕ್ಫ್ ಮಂಡಳಿಯ ಆಡಳಿತಾಧಿಕಾರಿಯಾಗಿ ಮುಂದುವರೆಸಲು ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : MWD 193 WES 2009, ಬೆಂಗಳೂರು, ದಿನಾಂಕ 13ನೇ ಜುಲೈ 2010**

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಕರ್ನಾಟಕ ರಾಜ್ಯ ವಕ್ಫ್ ಮಂಡಳಿಯ ರದ್ದತಿಯ ಅವಧಿಯನ್ನು ಸೆಕ್ಷನ್ 99(3)(a) ಅಡಿಯಲ್ಲಿ ದಿನಾಂಕ: 19–09–2010ರವರೆಗೆ ಮುಂದುವರೆಸಿ ಹಾಗೂ ಶ್ರೀ ಎಂ.ಎ.ಸಲೀಂ, ಐ.ಪಿ.ಎಸ್. ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೋಲೀಸ್, ಕೇಂದ್ರಸ್ಥಾನ–1, ಡಿ.ಜಿ. ಮತ್ತು ಐ.ಜಿ.ಪಿ. ಕಛೇರಿ ಬೆಂಗಳೂರು, ಇವರನ್ನೇ ಕರ್ನಾಟಕ ರಾಜ್ಯ ವಕ್ಫ್ ಮಂಡಳಿಯ ಆಡಳಿತಾಧಿಕಾರಿಯನ್ನಾಗಿ ದಿನಾಂಕ: 19–09–2010ರವರೆಗೆ ಮುಂದುವರೆಸಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಲ್.ಎಸ್. ವಾಸನ್**
ಸರ್ಕಾರದ ಅಧೀನ ಕಾರ್ಯದರ್ಶಿ
ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ

## ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಗುರುವಾರ, ಜುಲೈ ೧೫, ೨೦೧೦ (ಆಷಾಢ ೨೪, ಶಕ ವರ್ಷ ೧೯೩೨) | ನಂ. ೮೧೫ |
|---|---|---|

**ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.**

**ಪ್ರಪತ್ರ–2**

[12(2) ನೇ ನಿಯಮವನ್ನು ನೋಡಿ]

**ಅಧಿಸೂಚನೆ**

**ಸಂಖ್ಯೆ ರಾಚು ಸಿಆರ್.77/2010–11, ದಿನಾಂಕ : 14–7–2010.**

1993 ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಉಪಬಂಧಗಳ ಮೇರೆಗೆ ಗ್ರಾಮ ಪಂಚಾಯತಿ ಸಾರ್ವತ್ರಿಕ ಚುನಾವಣೆ 2010 ರ ನಂತರ ಆಯ್ಕೆಯಾಗದೇ ಖಾಲಿ ಉಳಿದಿರುವ ದಾವಣಗೆರೆ ಜಿಲ್ಲೆಯ ಹರಿಹರ ತಾಲ್ಲೂಕಿನ ಕೆಳಕಾಣಿಸಿದ ಕ್ಷೇತ್ರಗಳಿಂದ ಗ್ರಾಮ ಪಂಚಾಯತಿಗೆ ಸದಸ್ಯರ ಸ್ಥಾನಗಳನ್ನು ತುಂಬಲು ಚುನಾವಣೆ ನಡೆಸಬೇಕಾಗಿದೆ.

| ತಾಲ್ಲೂಕು | ಗ್ರಾಮ ಪಂಚಾಯತಿ ಸಂಖ್ಯೆ ಹಾಗೂ ಹೆಸರು | ಕ್ಷೇತ್ರದ ಸಂಖ್ಯೆ ಹಾಗೂ ಹೆಸರು | ಸ್ಥಾನಗಳ ಸಂಖ್ಯೆ |
|---|---|---|---|
| ಹರಿಹರ | 15.ಕಡರನಾಯ್ಕನಹಳ್ಳಿ | 3.ಉಕ್ಕಡಗಾತ್ರಿ–1 | 3 |
| | | 4.ಉಕ್ಕಡಗಾತ್ರಿ–2 | 3 |

ಆದುದರಿಂದ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗಳನ್ನು ನಡೆಸುವ) ನಿಯಮಗಳು 1993ರ 12ನೇ ನಿಯಮಕ್ಕನುಸಾರವಾಗಿ **ದಾವಣಗೆರೆ ಜಿಲ್ಲೆಯ ಜಿಲ್ಲಾಧಿಕಾರಿಯಾದ ಪಿ.ಎಸ್.ವಸ್ತ್ರದ** ಎಂಬ ಹೆಸರಿನ ನಾನು ಸದರಿ ಚುನಾವಣೆಗೆ ಸಂಬಂಧಿಸಿದ ಈ ಕೆಳಕಂಡ ಕಾರ್ಯಕ್ರಮ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸುತ್ತೇನೆ.

| | | |
|---|---|---|
| (ಎ) | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | **21–07–2010 (ಬುಧವಾರ)** |
| (ಬಿ) | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | **22–07–2010 (ಗುರುವಾರ)** |
| (ಸಿ) | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | **24–07–2010 (ಶನಿವಾರ)** |
| (ಡಿ) | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ, ದಿನ ಮತ್ತು ಸಮಯ | **01–08–2010 (ಭಾನುವಾರ) ಬೆಳಿಗ್ಗೆ 7.00 ಗಂಟೆಯಿಂದ ಸಾಯಂಕಾಲ 5.00 ಗಂಟೆಯವರೆಗೆ** |
| (ಇ) | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | **05–08–2010 (ಗುರುವಾರ)** |

**ಪಿ.ಎಸ್.ವಸ್ತ್ರದ**
ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ.

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಗುರುವಾರ, ಜುಲೈ ೧೫, ೨೦೧೦ (ಆಷಾಢ ೨೪, ಶಕ ವರ್ಷ ೧೯೩೨) | ನಂ. ೮೧೬ |
|---|---|---|

**ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.**

**ಪ್ರಪತ್ರ–2**

[12(2) ನೇ ನಿಯಮವನ್ನು ನೋಡಿ]

**ಅಧಿಸೂಚನೆ**

**ಸಂಖ್ಯೆ ರಾಚು ಸಿಆರ್.77/2010–11, ದಿನಾಂಕ : 14–7–2010.**

1993 ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಉಪಬಂಧಗಳ ಮೇರೆಗೆ ಗ್ರಾಮ ಪಂಚಾಯತಿ ಸಾರ್ವತ್ರಿಕ ಚುನಾವಣೆ 2010 ರ ಚುನಾವಣೆಯಲ್ಲಿ ಆಯ್ಕೆಯಾದ ಅಭ್ಯರ್ಥಿಯ ಮರಣದಿಂದ ತೆರವಾಗಿರುವ ದಾವಣಗೆರೆ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನ ಕೆಳಕಾಣಿಸಿದ ಕ್ಷೇತ್ರಗಳಿಂದ ಗ್ರಾಮ ಪಂಚಾಯತಿಗೆ ಸದಸ್ಯರ ಸ್ಥಾನಗಳನ್ನು ತುಂಬಲು ಚುನಾವಣೆ ನಡೆಸಬೇಕಾಗಿದೆ.

| ತಾಲ್ಲೂಕು | ಗ್ರಾಮ ಪಂಚಾಯತಿ ಸಂಖ್ಯೆ ಹಾಗೂ ಹೆಸರು | ಕ್ಷೇತ್ರದ ಸಂಖ್ಯೆ ಹಾಗೂ ಹೆಸರು | ಸ್ಥಾನಗಳ ಸಂಖ್ಯೆ |
|---|---|---|---|
| ಹೊನ್ನಾಳಿ | 41.ಸಾಸ್ವೇಹಳ್ಳಿ | 6.ಐನೂರು | 1 |

ಆದುದರಿಂದ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗಳನ್ನು ನಡೆಸುವ) ನಿಯಮಗಳು 1993ರ 12ನೇ ನಿಯಮಕ್ಕನುಸಾರವಾಗಿ **ದಾವಣಗೆರೆ ಜಿಲ್ಲೆಯ ಜಿಲ್ಲಾಧಿಕಾರಿಯಾದ ಪಿ.ಎಸ್.ವಸ್ತ್ರದ** ಎಂಬ ಹೆಸರಿನ ನಾನು ಸದರಿ ಚುನಾವಣೆಗೆ ಸಂಬಂಧಿಸಿದ ಈ ಕೆಳಕಂಡ ಕಾರ್ಯಕ್ರಮ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸುತ್ತೇನೆ.

| | | |
|---|---|---|
| (ಎ) | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | **21–07–2010 (ಬುಧವಾರ)** |
| (ಬಿ) | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | **22–07–2010 (ಗುರುವಾರ)** |
| (ಸಿ) | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | **24–07–2010 (ಶನಿವಾರ)** |
| (ಡಿ) | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ, ದಿನ ಮತ್ತು ಸಮಯ | **01–08–2010 (ಭಾನುವಾರ) ಬೆಳಿಗ್ಗೆ 7.00 ಗಂಟೆಯಿಂದ ಸಾಯಂಕಾಲ 5.00 ಗಂಟೆಯವರೆಗೆ** |
| (ಇ) | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | **05–08–2010 (ಗುರುವಾರ)** |

**ಪಿ.ಎಸ್.ವಸ್ತ್ರದ**
ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ.

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಗುರುವಾರ, ಜುಲೈ ೧೫, ೨೦೧೦ (ಆಷಾಢ ೨೪, ಶಕ ವರ್ಷ ೧೯೩೨) | ನಂ. ೮೧೭ |
|---|---|---|

**ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.**

**ಪ್ರಪತ್ರ–2**

[12(2) ನೇ ನಿಯಮವನ್ನು ನೋಡಿ]

**ಅಧಿಸೂಚನೆ**

**ಸಂಖ್ಯೆ ರಾಚು ಸಿಆರ್.77/2010–11, ದಿನಾಂಕ : 14–7–2010.**

1993 ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಉಪಬಂಧಗಳ ಮೇರೆಗೆ ಗ್ರಾಮ ಪಂಚಾಯತಿ ಸಾರ್ವತ್ರಿಕ ಚುನಾವಣೆ 2010 ರ ನಂತರ ಆಯ್ಕೆಯಾಗದೇ ಖಾಲಿ ಉಳಿದಿರುವ ದಾವಣಗೆರೆ ಜಿಲ್ಲೆಯ ಚನ್ನಗಿರಿ ತಾಲ್ಲೂಕಿನ ಕೆಳಕಾಣಿಸಿದ ಕ್ಷೇತ್ರಗಳಿಂದ ಗ್ರಾಮ ಪಂಚಾಯತಿಗೆ ಸದಸ್ಯರ ಸ್ಥಾನಗಳನ್ನು ತುಂಬಲು ಚುನಾವಣೆ ನಡೆಸಬೇಕಾಗಿದೆ.

| ತಾಲ್ಲೂಕು | ಗ್ರಾಮ ಪಂಚಾಯತಿ ಸಂಖ್ಯೆ ಹಾಗೂ ಹೆಸರು | ಕ್ಷೇತ್ರದ ಸಂಖ್ಯೆ ಹಾಗೂ ಹೆಸರು | ಸ್ಥಾನಗಳ ಸಂಖ್ಯೆ |
|---|---|---|---|
| **ಚನ್ನಗಿರಿ** | **8.ನಿಲೋಗಲ್** | **3.ಗುಡ್ಡದಬೆನಕನಹಳ್ಳಿ** | **1** |

ಆದುದರಿಂದ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗಳನ್ನು ನಡೆಸುವ) ನಿಯಮಗಳು 1993ರ 12ನೇ ನಿಯಮಕ್ಕನುಸಾರವಾಗಿ **ದಾವಣಗೆರೆ ಜಿಲ್ಲೆಯ ಜಿಲ್ಲಾಧಿಕಾರಿಯಾದ ಪಿ.ಎಸ್.ವಸ್ತ್ರದ** ಎಂಬ ಹೆಸರಿನ ನಾನು ಸದರಿ ಚುನಾವಣೆಗೆ ಸಂಬಂಧಿಸಿದ ಈ ಕೆಳಕಂಡ ಕಾರ್ಯಕ್ರಮ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸುತ್ತೇನೆ.

| | | |
|---|---|---|
| (ಎ) | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | **21–07–2010 (ಬುಧವಾರ)** |
| (ಬಿ) | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | **22–07–2010 (ಗುರುವಾರ)** |
| (ಸಿ) | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | **24–07–2010 (ಶನಿವಾರ)** |
| (ಡಿ) | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ, ದಿನ ಮತ್ತು ಸಮಯ | **01–08–2010 (ಭಾನುವಾರ) ಬೆಳಿಗ್ಗೆ 7.00 ಗಂಟೆಯಿಂದ ಸಾಯಂಕಾಲ 5.00 ಗಂಟೆಯವರೆಗೆ** |
| (ಇ) | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | **05–08–2010 (ಗುರುವಾರ)** |

**ಪಿ.ಎಸ್.ವಸ್ತ್ರದ**
ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ.

## ವಿಶೇಷ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಗುರುವಾರ, ಜುಲೈ ೧೫, ೨೦೧೦ (ಆಷಾಢ ೨೪, ಶಕ ವರ್ಷ ೧೯೩೨) | ನಂ. ೮೧೮ |

**PERSONNEL & ADMINISTRATIVE REFORMS SECRETARIAT**

**NOTIFICATION**

**No. DPAR 192 SLU 2009, Bangalore, Dated: 15th July, 2010**

**PREAMBLE**:

WHEREAS Sri B.S.Yeddyurappa, Chief Minister has recommended that Justice Sri S.B.Majage, former Judge of the High Court of Karnataka, may be appointed as Upalokayukta of Karnataka;

WHEREAS this recommendation has been made after consulting the Chief Justice of High Court, the Speaker, Legislative Assembly, the Chairman, Legislative Council and Leaders of Opposition in both Houses of the Karnataka Legislature.

**O R D E R**

Now, therefore, in exercise of the powers vested in me under Section-3 of the Karnataka Lokayukta Act, 1984 (Karnataka Act No.4 of 1985), I, H.R.Bhardwaj, Governor of Karnataka, hereby appoint Justice Sri S.B.Majage, former Judge of the High Court of Karnataka, as the Upalokayukta of Karnataka State.

Sd/-
**H.R.BHARDWAJ**
GOVERNOR OF KARNATAKA.

By Order and in the name of the Governor of Karnataka,
**P. MARKANDEYA**
Under Secretary to Government,
Department of Personnel and Administrative
Reforms (Service Rules-2).

| ಭಾಗ – IV-A | ಬೆಂಗಳೂರು, ಗುರುವಾರ, ಜುಲೈ ೧೫, ೨೦೧೦ (ಆಷಾಢ ೨೪, ಶಕ ವರ್ಷ ೧೯೩೨) | ನಂ. ೮೧೯ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/133/Bill/2010, Bangalore, Dated: 15th July, 2010**

The following Bill was introduced in Legislative Assembly on 15.7.2010.

**THE KARNATAKA INFORMATION TECHNOLOGY INVESTMENT REGIONS BILL, 2010**

**(L.A. Bill No. 17 of 2010)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಆರನೇ ಅಧಿವೇಶನ**

**ಕರ್ನಾಟಕ ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳ ವಿಧೇಯಕ, 2010**

**(2010ರ ವಿಧಾನಸಭೆಯ ವಿಧೇಯಕ ಸಂಖ್ಯೆ 17)**

ಹೂಡಿಕೆಯನ್ನು ಪ್ರೋತ್ಸಾಹಿಸುವುದಕ್ಕಾಗಿ ಮತ್ತು ರಫ್ತುಗಳನ್ನು ಹೆಚ್ಚಿಸಲು ಹಾಗೂ ಉದ್ಯೋಗಾವಕಾಶವನ್ನು ಕಲ್ಪಿಸಲು, ಕರ್ನಾಟಕ ರಾಜ್ಯದಲ್ಲಿ ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳನ್ನು ಸ್ಥಾಪಿಸುವುದಕ್ಕಾಗಿ ಉಪಬಂಧ ಕಲ್ಪಿಸಲು ಒಂದು ವಿಧೇಯಕ.

ಕರ್ನಾಟಕ ರಾಜ್ಯದಲ್ಲಿ ಮಾಹಿತಿ ತಂತ್ರಜ್ಞಾನ (ಐಟಿ), ಮಾಹಿತಿ ತಂತ್ರಜ್ಞಾನ ಪೂರಕ ಸೇವೆಗಳು (ಐಟಿಇಎಸ್), ವಿದ್ಯುನ್ಮಾನ ಹಾರ್ಡ್ ವೇರ್ ಉತ್ಪಾದನೆ (ಇಹೆಚ್ಎಂ) ಘಟಕಗಳಲ್ಲಿ ಹೂಡಿಕೆಯನ್ನು ಪ್ರೋತ್ಸಾಹಿಸುವುದು, ರಫ್ತುಗಳನ್ನು ಹೆಚ್ಚಿಸುವುದು ಮತ್ತು ಉದ್ಯೋಗಾವಕಾಶವನ್ನು ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

## ಅಧ್ಯಾಯ – I

### ಪ್ರಾಥಮಿಕ

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು **ಕರ್ನಾಟಕ ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳ ಅಧಿನಿಯಮ, 2010** ಎಂದು ಕರೆಯತಕ್ಕದ್ದು.

(2) ಇದು, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(1) **"ಪ್ರಾಧಿಕಾರ"** ಎಂದರೆ, ಕರ್ನಾಟಕ ಕೈಗಾರಿಕಾ ಪ್ರದೇಶ ಅಭಿವೃದ್ಧಿ ಅಧಿನಿಯಮ, 1966ರ (1966ರ ಕರ್ನಾಟಕ ಅಧಿನಿಯಮ 18) ಅಡಿಯಲ್ಲಿ ರಚಿತವಾದ ಕರ್ನಾಟಕ ಕೈಗಾರಿಕಾ ಪ್ರದೇಶ ಅಭಿವೃದ್ಧಿ ಮಂಡಳಿ, ಕರ್ನಾಟಕ ಗೃಹ ಮಂಡಳಿ ಅಧಿನಿಯಮ, 1962ರ (1963ರ ಕರ್ನಾಟಕ ಅಧಿನಿಯಮ 10) ಅಡಿಯಲ್ಲಿ ರಚನೆಯಾದ ಕರ್ನಾಟಕ ಗೃಹ ಮಂಡಳಿ ಮತ್ತು ಯಾವುದೇ ಹೆಸರಿನಿಂದ ಕರೆಯಲಾಗುವ, ಭೂ ಸ್ವಾಧೀನಪಡಿಸಿಕೊಳ್ಳಲು ಅಧಿಕೃತಗೊಳಿಸಲಾದ ಅಂಥ ಇತರ ಪ್ರಾಧಿಕಾರ ಅಥವಾ ಮಂಡಳಿ;

(2) **"ಮಂಡಳಿ"** ಎಂದರೆ, 8ನೇ ಪ್ರಕರಣದ ಅಡಿಯಲ್ಲಿ ರಚನೆಯಾದ ವ್ಯವಸ್ಥಾಪನಾ ಮಂಡಳಿ;

(3) **"ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿ"** ಎಂದರೆ, ಮಂಡಳಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ;

(4) **"ಅಭಿವೃದ್ಧಿಕಾರ ಅಥವಾ ಸಹ–ಅಭಿವೃದ್ಧಿಕಾರ"** ಎಂದರೆ, ಪಾರದರ್ಶಕ ವ್ಯವಸ್ಥೆಯ ಮೂಲಕ ರಾಜ್ಯ ಸರ್ಕಾರವು, ಅಭಿವೃದ್ಧಿಕಾರ ಅಥವಾ ಸಹ–ಅಭಿವೃದ್ಧಿಕಾರ ಎಂದು ಆಯ್ಕೆಮಾಡಿದ ಅಭಿವೃದ್ಧಿಕಾರ ಅಥವಾ ಸಹ–ಅಭಿವೃದ್ಧಿಕಾರ;

(5) **"ಕಾರ್ಯ ಸಾಧ್ಯತಾ ವರದಿ"** ಎಂದರೆ, 3ನೇ ಪ್ರಕರಣದ (1)ನೇ ಉಪ ಪ್ರಕರಣದ ಅಡಿಯಲ್ಲಿ ಸಿದ್ಧಪಡಿಸಲಾದ ಕಾರ್ಯ ಸಾಧ್ಯತಾ ವರದಿ;

(6) **"ಉನ್ನತಾಧಿಕಾರ ಸಮಿತಿ"** ಎಂದರೆ, ಸಂಪರ್ಕ ಮತ್ತು ಮಾಹಿತಿ ತಂತ್ರಜ್ಞಾನ ಮಂತ್ರಾಲಯ, ನವದೆಹಲಿ ಇದರ 2008ರ ಮೇ 28ನೇ ದಿನಾಂಕದ ಕಾರ್ಯನೀತಿ ನಿರ್ಣಯಕ್ಕನುಸಾರ ಭಾರತ ಸರ್ಕಾರವು ರಚಿಸಿದ ಉನ್ನತಾಧಿಕಾರ ಸಮಿತಿ;

(7) **"ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳು (ಐಟಿಐಆರ್‌ಎಸ್)"** ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ಘೋಷಿಸಲಾದ ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳು;

(8) **"ನೋಡಲ್ ಇಲಾಖೆ"** ಎಂದರೆ, ರಾಜ್ಯ ಸರ್ಕಾರದ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ;

(9) **"ಕಾರ್ಯನೀತಿ ನಿರ್ಣಯ"** ಎಂದರೆ, ಭಾರತ ಸರ್ಕಾರದ ರಾಜ್ಯಪತ್ರದಲ್ಲಿ 2008ರ ಮೇ 28ರಂದು ಪ್ರಕಟವಾದ, ಸಂಪರ್ಕ ಮತ್ತು ಮಾಹಿತಿ ತಂತ್ರಜ್ಞಾನ ಮಂತ್ರಾಲಯವು (ಮಾಹಿತಿ ತಂತ್ರಜ್ಞಾನ ಇಲಾಖೆ) ಹೊರಡಿಸಿದ್ದ ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳನ್ನು (ಐಟಿಐಆರ್‌ಎಸ್) ಸ್ಥಾಪಿಸುವುದಕ್ಕಾಗಿನ ಕಾರ್ಯನೀತಿ ನಿರ್ಣಯ;

(10) **"ರಾಜ್ಯ ಮಟ್ಟದ ಅಧಿಕಾರವುಳ್ಳ ಸಮಿತಿ"** ಎಂದರೆ, 12ನೇ ಪ್ರಕರಣದ ಅಡಿಯಲ್ಲಿ ರಚಿತವಾದ ರಾಜ್ಯ ಮಟ್ಟದ ಅಧಿಕಾರದ/ ಅಧಿಕೃತ ಸಮಿತಿ;

## ಅಧ್ಯಾಯ – II

## ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳ ಘೋಷಣೆ

**3. ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳ ಘೋಷಣೆ.–** ರಾಜ್ಯ ಸರ್ಕಾರವು, ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶವನ್ನು ಸ್ಥಾಪಿಸುವುದಕ್ಕಾಗಿ ಸೂಕ್ತ ಸ್ಥಳವನ್ನು (ಕೃಷಿಯೇತರ ಭೂಮಿಗೆ ಪ್ರಾಶಸ್ತ್ಯ ನೀಡಿ) ಗುರುತಿಸತಕ್ಕದ್ದು ಮತ್ತು ಯೋಜನೆಯನ್ನು ತಯಾರಿಸಿ ಕೇಂದ್ರ ಸರ್ಕಾರದ ಅನುಮೋದನೆಗೆ ಪ್ರಸ್ತಾವವನ್ನು ಸಲ್ಲಿಸತಕ್ಕದ್ದು. ಈ ಉದ್ದೇಶಕ್ಕಾಗಿ, ಸೂಕ್ತ ಏಜೆನ್ಸಿಯ ಮೂಲಕ, ಇತರ ವಿಷಯಗಳೊಂದಿಗೆ, ಈ ಕೆಳಗಿನವುಗಳನ್ನು ಒಳಗೊಳ್ಳುವ, ಒಂದು ಕಾರ್ಯಸಾಧ್ಯತಾ ವರದಿಯನ್ನು ತಯಾರಿಸುವುದಕ್ಕಾಗಿ ತಾಂತ್ರಿಕ–ಆರ್ಥಿಕ ಪೂರ್ವ ಕಾರ್ಯಸಾಧ್ಯತಾ ಸಮೀಕ್ಷೆಯೊಂದನ್ನು ನಡೆಸತಕ್ಕದ್ದು, ಎಂದರೆ:–

(ಎ) ಪ್ರಸ್ತಾವಿತ ಪ್ರದೇಶದ ಗಡಿ ಗುರುತು ಮಾಡುವುದು;

(ಬಿ) ಅಗತ್ಯವಿರುವ ಮೂಲ ಸೌಕರ್ಯದ ಸ್ವರೂಪ ಮತ್ತು ವ್ಯಾಪ್ತಿ;

(ಸಿ) ಭೂಮಿ ಬಳಕೆ ವಿಧಾನ ಎಂದರೆ, ಮಾಹಿತಿ ತಂತ್ರಜ್ಞಾನ, ಕೈಗಾರಿಕೆ, ವಾಣಿಜ್ಯ, ನಿವಾಸಸ್ಥಳ, ಆಸ್ಪತ್ರೆಗಳು, ಶಾಲೆಗಳು, ಉದ್ಯಾನವನಗಳು, ರಸ್ತೆಗಳು ಇತ್ಯಾದಿಗಳಂಥ, ನಿರ್ದಿಷ್ಟಪಡಿಸಲಾದ ಭೂ ಬಳಕೆಗಳಿಗಾಗಿ ಇಡೀ ಪ್ರದೇಶವನ್ನು ವಿಭಾಗಿಸುವುದು;

(ಡಿ) ನಿರ್ದಿಷ್ಟಪಡಿಸಲಾದ ಭೂ ನಿವೇಶನಗಳ ಸಂಬಂಧದಲ್ಲಿ, ಮೇಲಿನ ಬಳಕೆಗಳನ್ನು ಸ್ಪಷ್ಟವಾಗಿ ಗುರುತಿಸುವ ಮತ್ತು ಒಳಗೊಂಡ ಪ್ರದೇಶ, ಎತ್ತರಕ್ಕೆ ಸಂಬಂಧಿಸಿದ ನಿರ್ಬಂಧಗಳು ಮತ್ತು ಫ್ಲೋರ್ ಸರ್‌ಫೇಸ್ ಇಂಟೆಜರ್ (ಎಫ್‌ಎಸ್‌ಐ) ಇಂಥ ಅಭಿವೃದ್ಧಿ ಮಾನದಂಡಗಳನ್ನು ಕೂಡಾ ಒಳಗೊಳ್ಳುವ ಒಂದು ಮಹಾ ಯೋಜನೆಯನ್ನು ಸಿದ್ಧಪಡಿಸುವುದು;

(ಇ) ಭೂ ಸ್ವಾಧೀನತೆಯ ಮತ್ತು ಮೂಲ ಸೌಕರ್ಯಗಳ ಅಭಿವೃದ್ಧಿಯ ಸಂಭಾವ್ಯ ವೆಚ್ಚ, ಇಡೀ ಯೋಜನೆಯನ್ನು ಎರಡು ಹಂತಗಳಾಗಿ ಮಾಡಿ, ಅದರಲ್ಲಿ ಮೊದಲನೇ ಹಂತವು ಅಧಿಸೂಚಿತ ಪ್ರದೇಶದ ಶೇಕಡಾ ಇಪ್ಪತ್ತರಷ್ಟನ್ನು ಮೀರತಕ್ಕದ್ದಲ್ಲ.

(2) ಪ್ರಸ್ತಾವಕ್ಕೆ ಭಾರತ ಸರ್ಕಾರದ ಅನುಮೋದನೆಯನ್ನು ಪಡೆದ ತರುವಾಯ, ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ಸಾಮಾನ್ಯ ಮೂಲ ಸೌಕರ್ಯ ಮತ್ತು ಬೆಂಬಲಿತ ಸೇವೆಗಳನ್ನು ಬಳಸಿಕೊಳ್ಳುವ ಮೂಲಕ ಮಾಹಿತಿ ತಂತ್ರಜ್ಞಾನ, ಮಾಹಿತಿ ತಂತ್ರಜ್ಞಾನ ಪೂರಕ ಸೇವೆಗಳು, ವಿದ್ಯುನ್ಮಾನ ಹಾರ್ಡ್‌ವೇರ್ ಉತ್ಪಾದನೆ ಘಟಕಗಳಲ್ಲಿ ಹೂಡಿಕೆಯನ್ನು ಪ್ರೋತ್ಸಾಹಿಸುವ ಉದ್ದೇಶಕ್ಕಾಗಿ ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳನ್ನು (ಐಟಿಐಆರ್‌ಎಸ್) ಘೋಷಿಸಬಹುದು.

(3) ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳು,–

(ಎ) ಸಂಯೋಜಿತ ಸೇವೆಗಳು ಮತ್ತು ಮೂಲಭೂತ ಸೌಕರ್ಯಗಳೊಂದಿಗೆ ಮಾಹಿತಿ ತಂತ್ರಜ್ಞಾನ/ಮಾಹಿತಿ ತಂತ್ರಜ್ಞಾನ ಸೇವೆಗಳು ಮತ್ತು ವಿದ್ಯುನ್ಮಾನ ಹಾರ್ಡ್‌ವೇರ್ ಉತ್ಪಾದನೆ ಘಟಕಗಳ (ಇಎಚ್‌ಎಂ ಘಟಕಗಳು) ಸೌಲಭ್ಯಗಳನ್ನು, ಸ್ಥಾಪಿಸುವುದಕ್ಕಾಗಿ ಯೋಜಿಸಲಾದ, ಅಂದಾಜು ಕನಿಷ್ಠ ನಲವತ್ತು ಚದರ ಕಿಲೋಮೀಟರುಗಳ ಪ್ರದೇಶದೊಂದಿಗೆ ಹೂಡಿಕೆ ಪ್ರದೇಶಗಳ ನಿರ್ದಿಷ್ಟವಾಗಿ ನಕ್ಷೆಯನ್ನು ಬರೆದಿರತಕ್ಕದ್ದು;

(ಬಿ) ಉತ್ಪಾದನಾ ಘಟಕಗಳು, ಸಾರ್ವಜನಿಕ ಉಪಯುಕ್ತತೆಗಳು, ವ್ಯವಸ್ಥಾಪನಾ ತಂತ್ರ, (ಲಾಗಿಸ್ಟಿಕ್) ಪರಿಸರ ಸಂರಕ್ಷಣೆ ವ್ಯವಸ್ಥೆಗಳು, ನಿವಾಸಸ್ಥಳ ಪ್ರದೇಶಗಳು ಮತ್ತು ಆಡಳಿತಾತ್ಮಕ ಸೇವೆಗಳ ಸಂಯೋಜನೆಯಾಗಿರತಕ್ಕದ್ದು;

(ಸಿ) ವ್ಯವಸ್ಥಾಪನಾ ತಂತ್ರಗಳು ಮತ್ತು ಇತರ ಸೇವೆಗಳು ಮತ್ತು ಅಗತ್ಯವಾದ ಮೂಲ ಸೌಲಭ್ಯಗಳೊಂದಿಗೆ ಮಾಹಿತಿ ತಂತ್ರಜ್ಞಾನ/ಮಾಹಿತಿ ತಂತ್ರಜ್ಞಾನ ಸಮರ್ಥಗೊಳಿಸುವ ಸೇವೆಗಳು ಮತ್ತು ವಿದ್ಯುನ್ಮಾನ ಹಾರ್ಡ್‌ವೇರ್ ಉತ್ಪಾದನೆ ಘಟಕಗಳ ಸೌಲಭ್ಯಗಳನ್ನು ನೆಲೆಗೊಳಿಸತಕ್ಕ ಸ್ಥಳಗಳಲ್ಲಿ ಸಂಸ್ಕರಣ ಸೌಲಭ್ಯಗಳನ್ನು ಹೊಂದಿರತಕ್ಕದ್ದು;

(ಡಿ) ನಿವಾಸಸ್ಥಳ, ವಾಣಿಜ್ಯ ಮತ್ತು ಇತರ ಸಾಮಾಜಿಕ ಹಾಗೂ ಸಾಂಸ್ಥಿಕ ಮೂಲ ಸೌಕರ್ಯಗಳನ್ನು ಒಳಗೊಂಡಿರುವ ಸಂಸ್ಕರಣೇತರ ಪ್ರದೇಶವನ್ನು ಹೊಂದಿರತಕ್ಕದ್ದು;

(ಇ) ಹೆಸರಿಸಲಾದ ಒಟ್ಟು ಪ್ರದೇಶದ ಕನಿಷ್ಠ ಶೇಕಡಾ ನಲವತ್ತರಷ್ಟು ಸಂಸ್ಕರಣಾ ಪ್ರದೇಶವನ್ನು ಹೊಂದಿರತಕ್ಕದ್ದು. ಅಂಥ ಸಂಸ್ಕರಣ ಪ್ರದೇಶವು ಒಂದಕ್ಕೊಂದು ಹೊಂದಿ ಕೊಂಡಿರಬಹುದು ಅಥವಾ ಹೊಂದಿಕೊಂಡಿಲ್ಲದೇ ಇರಬಹುದು;

(ಎಫ್) ರಾಜ್ಯ ಸರ್ಕಾರವು, ಈ ಅಧಿನಿಯಮದಡಿಯಲ್ಲಿ ವಿಧ್ಯುಕ್ತವಾಗಿ ಅಧಿಸೂಚಿಸಿದ ಒಂದು ಅಥವಾ ಹೆಚ್ಚು ವಿಶೇಷ ಆರ್ಥಿಕ ವಲಯಗಳು (ಎಸ್‌ಇಜೆಡ್‌ಎಸ್), ಕೈಗಾರಿಕಾ ಪಾರ್ಕುಗಳು, ಮುಕ್ತ ವ್ಯಾಪಾರ ಮತ್ತು ಉಗ್ರಾಣ ವಲಯಗಳು, ರಫ್ತು ಆಧಾರಿತ ಘಟಕಗಳು, ಅಥವಾ ಅಭಿವೃದ್ಧಿ ಕೇಂದ್ರಗಳನ್ನು ಒಳಗೊಳ್ಳಬಹುದು. ಜಾರಿಯಲ್ಲಿರುವ ಸಂಬಂಧಪಟ್ಟ ಅಧಿನಿಯಮಗಳು ಅಥವಾ ಕಾರ್ಯನೀತಿ/ ಅಥವಾ ಕಾರ್ಯನೀತಿಗಳಡಿಯಲ್ಲಿ ಲಭ್ಯವಿರುವ ಎಲ್ಲಾ ಪ್ರಯೋಜನಗಳು, ಮಾಹಿತಿ ತಂತ್ರಜ್ಞಾನದ ಹೂಡಿಕೆ ಪ್ರದೇಶಗಳ ಒಂದು ಭಾಗವಾಗಿ ಸದರಿ ವಲಯಗಳಿಗೆ ಅಥವಾ ಸಂದರ್ಭಾನುಸಾರ ಪಾರ್ಕುಗಳಿಗೆ ಲಭ್ಯವಾಗುವುದು ಮುಂದುವರೆಯತಕ್ಕದ್ದು;

(ಜಿ) ಜಾರಿಯಲ್ಲಿರುವ ಒಪ್ಪಂದಗಳನ್ನು / ಕೈಗಾರಿಕೆಗಳು ಮತ್ತು ಎಸ್ಟೇಟುಗಳನ್ನು / ಸೇವೆಗಳನ್ನು ಒಳಗೊಳ್ಳತಕ್ಕದ್ದು ಮತ್ತು ಪ್ರದೇಶದಿಂದ ಪ್ರಯೋಜನವಾಗತಕ್ಕದ್ದು ಮತ್ತು ಅದಕ್ಕೆ ಪೂರಕವಾಗಿರತಕ್ಕದ್ದು;

(ಹೆಚ್) ಹೊಸ ಸಂಯೋಜಿತ ಉಪನಗರಗಳನ್ನೂ ಕೂಡಾ ಒಳಗೊಳ್ಳತಕ್ಕದ್ದು.

(4) ಪ್ರತಿಯೊಂದು ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶವು, ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳ ಸ್ಥಾಪನೆಯಲ್ಲಿ ಮಹತ್ವದ ಪಾತ್ರವನ್ನು ವಹಿಸತಕ್ಕ ಕೆಲವು ಸ್ಥಿರತ್ವ (ಆಂಕರಿಂಗ್) ಮಾಹಿತಿ ತಂತ್ರಜ್ಞಾನ / ಮಾಹಿತಿ ತಂತ್ರಜ್ಞಾನ ಪೂರಕ ಸೇವೆಗಳು ಮತ್ತು ವಿದ್ಯುನ್ಮಾನ ಹಾರ್ಡ್‌ವೇರ್ ಉತ್ಪಾದನಾ ಘಟಕಗಳನ್ನು ಹೊಂದಿರಬಹುದು.

(5) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999 ರ (2000ದ ಕರ್ನಾಟಕ ಅಧಿನಿಯಮ 29) ಉಪಬಂಧಗಳಿಗನುಸಾರವಾಗಿ ಪಾರದರ್ಶಕ ವ್ಯವಸ್ಥೆಯ ಮೂಲಕ, ರಾಜ್ಯ ಸರ್ಕಾರವು ಆಯ್ಕೆಮಾಡಿದ ಅಭಿವೃದ್ಧಿಕಾರ ಅಥವಾ ಅಭಿವೃದ್ಧಿಕಾರರು ಅಥವಾ ಸಹ–ಅಭಿವೃದ್ಧಿಕಾರರ ಒಂದು ಸಮೂಹವು ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳ ಆಂತರಿಕ ಮೂಲಸೌಕರ್ಯಗಳನ್ನು ನಿರ್ಮಿಸತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು. ಬಾಹ್ಯ ಸಂಪರ್ಕಗಳನ್ನು ಭಾರತ ಸರ್ಕಾರ ಮತ್ತು ರಾಜ್ಯ ಸರ್ಕಾರವು ಒದಗಿಸತಕ್ಕದ್ದು.

(6) ಬಾಹ್ಯ ಹಾಗೆಯೇ ಆಂತರಿಕ ಮೂಲಸೌಕರ್ಯದ ಬಳಕೆದಾರರು, ಅದರ ಬಳಕೆಗಾಗಿ, ಕೇಂದ್ರ ಅಥವಾ ರಾಜ್ಯ ಸರ್ಕಾರವು ಆಯವ್ಯಯ ಸಂಪನ್ಮೂಲಗಳ ಮೂಲಕ ಬೆಂಬಲಿಸುವ ಸೇವೆಯ ವ್ಯಾಪ್ತಿಯನ್ನು ಹೊರತುಪಡಿಸಿ, ಹಣವನ್ನು ಸಂದಾಯ ಮಾಡತಕ್ಕದ್ದು.

(7) (2)ನೇ ಉಪ ಪ್ರಕರಣದಡಿಯಲ್ಲಿ ಘೋಷಣೆಯ ತರುವಾಯ, ಪ್ರಸ್ತಾವಿತ ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳ ಸಮಗ್ರ ಪ್ರದೇಶವು, ಅದರಡಿಯಲ್ಲಿ ನಿರ್ದಿಷ್ಟ ಪಡಿಸಲಾಗಿದ ನಿಬಂಧನೆಗಳಿಗನುಸಾರವಾಗಿ ಕೃಷಿ ಭೂಮಿಯಿಂದ ಕೃಷಿಯೇತರ ಭೂಮಿಯಾಗಿ ಪರಿವರ್ತಿಸಲು ಅರ್ಹವಾಗತಕ್ಕದ್ದು.

(8) ರಾಜ್ಯ ಸರ್ಕಾರವು, ಅಂಥ ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳಿಗೆ, ಸಾರ್ವಜನಿಕ ರಸ್ತೆಗಳು, ಉದ್ಯಾನಗಳು ಮತ್ತು ಉಪಯುಕ್ತ ಸಂಪರ್ಕಗಳಂಥ ಸಾರ್ವಜನಿಕ ಸೌಕರ್ಯಗಳನ್ನು ಒಳಗೊಂಡ ಮೂಲ ಸೌಕರ್ಯಗಳನ್ನು, ನಿಯಮಿಸಲಾದ ಕಾಲ ಮಿತಿಯೊಳಗೆ ಒದಗಿಸತಕ್ಕದ್ದು.

(9) ಮಹಾ ಯೋಜನೆಯ ಸೂಕ್ತ ಅನುಷ್ಠಾನವನ್ನು ಖಚಿತಗೊಳಿಸುವುದಕ್ಕಾಗಿ, ಯಾವ ಉದ್ದೇಶಕ್ಕಾಗಿ ಘೋಷಿಸಲಾದ ಭೂಮಿಯನ್ನು ಸ್ವಾಧೀನ ಪಡಿಸಿಕೊಳ್ಳಲಾಗಿದೆಯೋ ಆ ಉದ್ದೇಶಕ್ಕಾಗಿ ಮೀಸಲಿಡತಕ್ಕದ್ದು.

**4. ರಾಜ್ಯ ಸರ್ಕಾರವು ಒದಗಿಸಬೇಕಾದ ಮೂಲ ಸೌಲಭ್ಯಗಳು.–** (1) ರಾಜ್ಯ ಸರ್ಕಾರವು ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳಿಗೆ ಈ ಮುಂದಿನ ಮೂಲಸೌಕರ್ಯಗಳನ್ನು ಒದಗಿಸತಕ್ಕದ್ದು, ಅವುಗಳೆಂದರೆ:–

(ಎ) ವಿದ್ಯುಚ್ಛಕ್ತಿ ಸಂಪರ್ಕ ಕಲ್ಪಿಸುವುದು ಮತ್ತು ವಿಶ್ವಾಸಾರ್ಹವಾದ ಹಾಗೂ ಉತ್ತಮ ಗುಣಮಟ್ಟದ ವಿದ್ಯಚ್ಛಕ್ತಿಯ ಲಭ್ಯತೆ. ಘಟಕಗಳು, ರಾಜ್ಯ ವಿದ್ಯುತ್ ನಿಯಂತ್ರಣ ಆಯೋಗದ ವಿನಿಯಮಗಳ ಅನ್ವಯ ಮುಕ್ತ ಪ್ರವೇಶ ಅವಕಾಶವನ್ನು ಕೋರಬಹುದು.

(ಬಿ) ಒಟ್ಟಾರೆ ನೀರಿನ ಅಗತ್ಯತೆಗಳನ್ನು ಒದಗಿಸುವುದು;

(ಸಿ) ರಸ್ತೆ ಸಂಪರ್ಕ ಕಲ್ಪಿಸುವುದು (ರಾಜ್ಯ ರಸ್ತೆಗಳು) ಮತ್ತು ಹತ್ತಿರದ ವಿಮಾನ ನಿಲ್ದಾಣಕ್ಕೆ ಸಮೂಹ ಸಾರಿಗೆ ಸಂಪರ್ಕ ಕಲ್ಪಿಸುವುದು;

(ಡಿ) ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳ ತುದಿಯಿಂದ, ಅಂತಿಮ ವಿಲೆ ಸ್ಥಳಗಳವರೆಗೆ ಒಳಚರಂಡಿ ಮತ್ತು ಕಲ್ಮಷ ನೀರು ಸಂಸ್ಕರಣಾ ಸಂಪರ್ಕ ಸಾಧನಗಳು;

(ಇ) ಆರೋಗ್ಯ, ಸುರಕ್ಷತೆ ಮತ್ತು ಪರಿಸರ ಕಾಳಜಿಗೆ ಸಂಬಂಧಿಸಿದಂತೆ ಸೂಕ್ತ ಮೂಲಸೌಕರ್ಯಗಳು;

(ಎಫ್) ಸೂಕ್ತ ಮತ್ತು ಸಾಕಷ್ಟು ನಿವಾಸ ಸೌಲಭ್ಯಗಳು;

(ಜಿ) ಶೈಕ್ಷಣಿಕ ಸೌಲಭ್ಯಗಳು;

(ಎಚ್) ಆರೋಗ್ಯ ಸೌಲಭ್ಯಗಳು;

(ಐ) ಸ್ಥಳೀಯ ವಾಣಿಜ್ಯ ಸೌಲಭ್ಯಗಳು;

(ಜೆ) ಮನರಂಜನಾ ಸೌಲಭ್ಯಗಳು;

(ಕೆ) ಸಾಮಾಜಿಕ–ಸಾಂಸ್ಕೃತಿಕ ಮತ್ತು ಮನೋರಂಜನಾ ಸೌಲಭ್ಯಗಳು; ಹಾಗೂ

(ಎಲ್) ನಿಯಮಿಸಬಹುದಾದ ಇತರ ಯಾವುದೇ ಸೌಲಭ್ಯ.

(2) ಪರಿಸರ ಮತ್ತು ಅರಣ್ಯ ಮಂತ್ರಾಲಯವು ನಿಯಮಿಸಿದ ಮಾನಕಗಳು ಮತ್ತು ಗುಣಮಟ್ಟಗಳನ್ನು ಅನುಸರಿಸತಕ್ಕದ್ದು ಎಂಬುದನ್ನು ರಾಜ್ಯ ಸರ್ಕಾರವು ಖಚಿತ ಪಡಿಸಿಕೊಳ್ಳತಕ್ಕದ್ದು.

(3) (1)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟ ಪಡಿಸಲಾದ ಸೌಲಭ್ಯಗಳನ್ನು ಅಭಿವೃದ್ಧಿಗಾರನ ಮೂಲಕ ರಾಜ್ಯ ಸರ್ಕಾರವು ಒದಗಿಸತಕ್ಕದ್ದು. ಆದಾಗ್ಯೂ, ಕಾರ್ಯನೀತಿ ನಿರ್ಣಯದಲ್ಲಿ ಸೂಚಿಸಲಾದಂತೆ ಕೇಂದ್ರ ಸರ್ಕಾರವೂ ಸಹ ನೆರವು ನೀಡತಕ್ಕದ್ದು.

**5. ಪ್ರೋತ್ಸಾಹಧನಗಳ ಹೆಚ್ಚುವರಿ ಪ್ಯಾಕೇಜುಗಳು.–** ರಾಜ್ಯ ಸರ್ಕಾರವು, ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳ ಅಭಿವೃದ್ಧಿಗಾಗಿ ಮತ್ತು ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳಲ್ಲಿ ಸ್ಥಾಪಿಸಲಾಗಿರುವ ಮಾಹಿತಿ ತಂತ್ರಜ್ಞಾನ/ಮಾಹಿತಿ ತಂತ್ರಜ್ಞಾನ ಪೂರಕ ಸೇವೆಗಳು / ವಿದ್ಯುನ್ಮಾನ ಹಾರ್ಡ್‌ವೇರ್ ಉತ್ಪಾದನಾ ಘಟಕಗಳಿಗಾಗಿ ಪ್ರೋತ್ಸಾಹಧನಗಳ ಹೆಚ್ಚುವರಿ ಪ್ಯಾಕೇಜನ್ನು (ಗಳನ್ನು) ಸಹ ಅಧಿಸೂಚಿಸಬಹುದು.

## ಅಧ್ಯಾಯ – III

## ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳಿಗಾಗಿ ಭೂ ಸ್ವಾಧೀನತೆ ಮತ್ತು ಹಂಚಿಕೆ

**6. ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳಿಗಾಗಿ ಭೂ ಸ್ವಾಧೀನತೆ.–** (1) ನೋಡಲ್ ಇಲಾಖೆಯಿಂದ ಪ್ರಸ್ತಾವವನ್ನು ಸ್ವೀಕರಿಸಿದ ತರುವಾಯ, ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳಿಗೆ, ವ್ಯವಸ್ಥಾಪನಾ ಮಂಡಳಿಯ ಮೂಲಕ, ಸ್ವಾಧೀನತೆ ವೆಚ್ಚಗಳು ಯಾವುದಾದರೂ ಇದ್ದಲ್ಲಿ, ಅವುಗಳನ್ನು ಅಭಿವೃದ್ಧಿಗಾರ ಅಥವಾ ಸಹ– ಅಭಿವೃದ್ಧಿಗಾರನು ಪಾವತಿಸುವುದಕ್ಕೆ ಒಳಪಟ್ಟು,–

(ಎ) ಭೂ ಸ್ವಾಧೀನ ಅಧಿನಿಮಯ, 1894ರ ಉಪಬಂಧಗಳಿಗೆ ಅನುಸಾರವಾಗಿ ರಾಜ್ಯ ಸರ್ಕಾರವು; ಅಥವಾ

(ಬಿ) ಪ್ರಾಧಿಕಾರದ ಮೂಲಕ, ಅಂಥ ಪ್ರಾಧಿಕಾರಕ್ಕೆ ಅನ್ವಯವಾಗುವ ಕಾನೂನಿಗೆ ಅನುಸಾರವಾಗಿ;

– ಭೂ ಸ್ವಾಧೀನತೆಯನ್ನು ಮಾಡತಕ್ಕದ್ದು.

(2) ರಾಜ್ಯ ಸರ್ಕಾರ ಅಥವಾ ಸಂದರ್ಭಾನುಸಾರ ಪ್ರಾಧಿಕಾರವು (1)ನೇ ಉಪ ಪ್ರಕರಣದ ಅಡಿಯಲ್ಲಿ ಹಾಗೆ ಸ್ವಾಧೀನ ಪಡಿಸಿಕೊಂಡ ಭೂಮಿಯನ್ನು, ವ್ಯವಸ್ಥಾಪನಾ ಮಂಡಳಿಗೆ ವರ್ಗಾವಣೆ ಮಾಡತಕ್ಕದ್ದು ಹಾಗೂ ತದನಂತರ ಅಂಥ ಭೂಮಿಯು ವ್ಯವಸ್ಥಾಪನಾ ಮಂಡಳಿಯಲ್ಲಿ ನಿಹಿತವಾಗತಕ್ಕದ್ದು.

**7. ವ್ಯವಸ್ಥಾಪನಾ ಮಂಡಳಿಯಿಂದ ಭೂ ಹಂಚಿಕೆ.–** (1) ವ್ಯವಸ್ಥಾಪನಾ ಮಂಡಳಿಯು, ನಿಯಮಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು, 8ನೇ ಪ್ರಕರಣದ (4)ನೇ ಉಪ ಪ್ರಕರಣದ (ಸಿ) ಖಂಡದಡಿಯಲ್ಲಿ ವ್ಯವಸ್ಥಾಪನಾ ಮಂಡಳಿಯು ಸಿದ್ಧಪಡಿಸಿದ ಮಹಾ ಯೋಜನೆಗನುಸಾರ ಈ ಅಧಿನಿಯಮದಡಿಯಲ್ಲಿ ಅಭಿವೃದ್ಧಿ ಉದ್ದೇಶಗಳಿಗಾಗಿ, ಅಭಿವೃದ್ಧಿಗಾರನಿಗೆ ಅಗತ್ಯವಾದ ಭೂಮಿಯನ್ನು ವರ್ಗಾವಣೆ ಮಾಡತಕ್ಕದ್ದು.

(2) ಮಹಾ ಯೋಜನೆಗೆ ಅನುಸಾರವಾಗಿ ಭೂಮಿಯನ್ನು ಅಭಿವೃದ್ಧಿಪಡಿಸಿದ ತರುವಾಯ, ಅಭಿವೃದ್ಧಿಗಾರನು, ನಿಯಮಿಸಬಹುದಾದಂಥ ಸಮಯದೊಳಗೆ ಅಭಿವೃದ್ಧಿ ಹೊಂದಿದ ಭೂಮಿಯ ಕನಿಷ್ಠ ಶೇಕಡಾ ಎಪ್ಪತ್ತೈದನ್ನು ಉದ್ಯಮದಾರರಿಗೆ ಮಾರಾಟ ಮಾಡತಕ್ಕದ್ದು.

## ಅಧ್ಯಾಯ – IV

## ವ್ಯವಸ್ಥಾಪನಾ ಮಂಡಳಿಯ ರಚನೆ ಮತ್ತು ಅದರ ಪ್ರಕಾರ್ಯಗಳು

**8. ವ್ಯವಸ್ಥಾಪನಾ ಮಂಡಳಿಯ ರಚನೆ ಮತ್ತು ಅದರ ಪ್ರಕಾರ್ಯಗಳು.–** (1)ರಾಜ್ಯ ಸರ್ಕಾರವು, ಪ್ರತಿಯೊಂದು ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳಿಗೆ, ಈ ಮುಂದಿನವರುಗಳನ್ನೊಳಗೊಂಡ ಒಂದು ವ್ಯವಸ್ಥಾಪನಾ ಮಂಡಳಿಯನ್ನು ರಚಿಸತಕ್ಕದ್ದು, ಎಂದರೆ:–

| | |
|---|---|
| (ಎ) ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನದ ಪ್ರಭಾರದಲ್ಲಿರುವ ಸಚಿವರು | – ಅಧ್ಯಕ್ಷರು |
| (ಬಿ) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ | – ಉಪಾಧ್ಯಕ್ಷರು |
| (ಸಿ) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ | – ಸದಸ್ಯರು |
| (ಡಿ) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ | – ಸದಸ್ಯರು |
| (ಇ) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಇಂಧನ ಇಲಾಖೆ | – ಸದಸ್ಯರು |
| (ಎಫ್) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ | – ಸದಸ್ಯರು |
| (ಜಿ) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ | – ಸದಸ್ಯರು |
| (ಎಚ್) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಜಲ ಸಂಪನ್ಮೂಲ ಇಲಾಖೆ | – ಸದಸ್ಯರು |
| (ಐ) ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ. | – ಸದಸ್ಯರು |
| (ಜೆ) ಮುಖ್ಯ ಕಾರ್ಯನಿರ್ವಾಹಣಾಧಿಕಾರಿ | ಸದಸ್ಯ ಕಾರ್ಯದರ್ಶಿ |

(2) ವ್ಯವಸ್ಥಾಪನಾ ಮಂಡಳಿಯು ಸಂಬಂಧಪಟ್ಟ ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶದ ಬಗ್ಗೆ ಯಾವುದೇ ಪ್ರಶ್ನೆಯನ್ನು ಪರಿಗಣಿಸುತ್ತಿರುವಾಗ, ವ್ಯವಸ್ಥಾಪನಾ ಮಂಡಳಿಯು ಸಂಬಂಧಪಟ್ಟ ಅಭಿವೃದ್ಧಿಗಾರ ಅಥವಾ ಸಹ–ಅಭಿವೃದ್ಧಿಗಾರನನ್ನೂ ಸದಸ್ಯನಾಗಿ ಜೊತೆಗೆ ಸೇರಿಸಿಕೊಳ್ಳಬಹುದು.

(3) ವ್ಯವಸ್ಥಾಪನಾ ಮಂಡಳಿಯು, ಮೇಲೆ ಹೇಳಿದ ಹೆಸರಿನ, ನಿರಂತರ ಉತ್ತರದಾಯಿತ್ವವನ್ನುಳ್ಳ ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಚರ ಮತ್ತು ಸ್ಥಿರ ಸ್ವತ್ತುಗಳೆರಡನ್ನು ಆರ್ಜಿಸುವ, ಧಾರಣ ಮಾಡುವ, ವಿಲೆ ಮಾಡುವ ಅಧಿಕಾರವನ್ನು ಹಾಗೂ ಒಂದು ಸಾಮಾನ್ಯ ಮೊಹರನ್ನು ಹೊಂದಿರತಕ್ಕದ್ದು ಹಾಗೂ ಸದರಿ ಹೆಸರಿನಿಂದ ದಾವೆ ಹೂಡತಕ್ಕದ್ದು ಅಥವಾ ದಾವೆಗೆ ಗುರಿಯಾಗತಕ್ಕದ್ದು.

(4) ವ್ಯವಸ್ಥಾಪನಾ ಮಂಡಳಿಯು, ಈ ಮುಂದಿನ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು, ಎಂದರೆ:–

(ಎ) ಇದು ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳ ಅಭಿವೃದ್ಧಿ ಮತ್ತು ನಿರ್ವಹಣೆಗೆ ಜವಾಬ್ದಾರಿಯಾಗಿರತಕ್ಕದ್ದು.

(ಬಿ) ಇದು ರಾಜ್ಯ ಮಟ್ಟದ ಅನುಮೋದನೆಗಳನ್ನು ನೀಡತಕ್ಕದ್ದು/ ತ್ವರಿತಗೊಳಿಸತಕ್ಕದ್ದು.

(ಸಿ) ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961ರ ಅನುಸಾರವಾಗಿ ಸಂಯೋಜಿತ ಉಪ ನಗರ, ಸಂಸ್ಕರಣಾ ಮತ್ತು ಸಂಸ್ಕರಣೇತರ ಪ್ರದೇಶಗಳಿಗಾಗಿ ಪ್ರದೇಶವನ್ನು ಕಾಯ್ದಿರಿಸಿ ವಿವರವಾದ ಒಂದು ಮಹಾ ಯೋಜನೆಯನ್ನು ಮತ್ತು ನಿಯಮಿಸಬಹುದಾದಂಥ ಇತರ ವಿವರಗಳನ್ನು ಸಿದ್ಧಪಡಿಸತಕ್ಕದ್ದು.

(ಡಿ) ನಿಯಮಿಸಬಹುದಾದಂಥ ಕಾಲಮಿತಿಯೊಳಗೆ ಅಂಥ ಒಪ್ಪಿಗೆಯನ್ನು ಪಡೆದ ತರುವಾಯ ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶದ ಘಟಕಗಳನ್ನು ಸ್ಥಾಪಿಸುವುದಕ್ಕಾಗಿ ಪ್ರಸ್ತಾವಗಳನ್ನು ಅನುಮೋದಿಸತಕ್ಕದ್ದು.

(ಇ) ಅಭಿವೃದ್ಧಿಗಾರ ಅಥವಾ ಸಹ–ಅಭಿವೃದ್ಧಿಗಾರರನ್ನು ಆಯ್ಕೆ ಮಾಡಿಕೊಳ್ಳಲು ಮತ್ತು ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶದ ಅಭಿವೃದ್ಧಿಗಾಗಿ ಒಪ್ಪಂದಗಳನ್ನು ಮಾಡಿಕೊಳ್ಳಲು ಅಧಿಕಾರವನ್ನು ಹೊಂದಿರತಕ್ಕದ್ದು.

(ಎಫ್) ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶದಲ್ಲಿ, ವಿದೇಶಿ ಮತ್ತು ದೇಶೀ ಇವೆರಡಿರಂದಲೂ ಹೂಡಿಕೆಗಳನ್ನು ಪ್ರೋತ್ಸಾಹಿಸುವುದಕ್ಕಾಗಿ ಉಪಬಂಧ ಕಲ್ಪಿಸತಕ್ಕದ್ದು.

(ಜಿ) ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶದೊಳಗೆ ಉತ್ಪಾದನೆಗೆ ಮತ್ತು ಅದರಿಂದ ಮಾಡಲಾಗುವ ರಫ್ತುಗಳಿಗೆ ಪ್ರೋತ್ಸಾಹವನ್ನು ಖಚಿತಪಡಿಸಿಕೊಳ್ಳತಕ್ಕದ್ದು.

(ಎಚ್) ಇದು, ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶದೊಳಗಿನ ಘಟಕಗಳಿಗೆ ಅನುಮೋದನೆ ನೀಡುವುದಕ್ಕಾಗಿ ಮತ್ತು ಒಪ್ಪಿಗೆ ನೀಡಿಕೆಗೆ ಅನುಕೂಲ ಮಾಡಿಕೊಡುವ ಅಧಿಕಾರ ಹೊಂದಿರತಕ್ಕದ್ದು.

(ಐ) ಇದು, ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶದಲ್ಲಿಯ ಪ್ರಕಾರ್ಯಗಳು ಮತ್ತು ನಿರ್ವಹಣೆಯನ್ನು ಪುನರೀಕ್ಷಿಸತಕ್ಕದ್ದು.

(ಜೆ) ಇದು, ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶದಲ್ಲಿಯ ಮೂಲ ಸೌಕರ್ಯ/ ಸ್ವತ್ತುಗಳ ಬಳಕೆಗಾಗಿ, ಬಳಕೆದಾರ ಅಥವಾ ಸೇವಾ ಚಾರ್ಜುಗಳ ವಿಧಿಸುವಿಕೆಯನ್ನು ಅಥವಾ ಶುಲ್ಕಗಳು ಅಥವಾ ಬಾಡಿಗೆಯನ್ನು ನಿಯಂತ್ರಿಸತಕ್ಕದ್ದು.

(ಕೆ) ಇದು, ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶದೊಳಗೆ ವಿಶೇಷ ಸೇವೆಗಳಿಗಾಗಿ ವಿಶೇಷ ಉದ್ದೇಶ ವಾಹನಗಳನ್ನು (ಎಸ್‌ಪಿವಿಎಸ್) ವಹಿಸಿಕೊಡಲು, ಪ್ರವೇಶಿಸಲು ಅಥವಾ ಸೃಜಿಸಲು ಪ್ರಾಧಿಕಾರವನ್ನು ಪ್ರತ್ಯಾಯೋಜಿಸುವ ಅಧಿಕಾರವನ್ನು ಚಲಾಯಿಸತಕ್ಕದ್ದು.

(ಎಲ್) ಇದು, ನಿಯಮಿಸಬಹುದಾದಂಥ ಇತರ ಯಾವುದೇ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

(5) ವ್ಯವಸ್ಥಾಪನಾ ಮಂಡಳಿಯು ತಾನು ಗೊತ್ತುಪಡಿಸಬಹುದಾದಂಥ ಸ್ಥಳಗಳಲ್ಲಿ ಮತ್ತು ಅಂಥ ಅವಧಿಗಳಲ್ಲಿ ಸಭೆ ಸೇರತಕ್ಕದ್ದು ಮತ್ತು ತನ್ನದೇ ಆದ ಪ್ರಕ್ರಿಯೆಗಳನ್ನು ನಿಯಂತ್ರಿಸತಕ್ಕದ್ದು.

(6) ವ್ಯವಸ್ಥಾಪನಾ ಮಂಡಳಿಯ ಒಟ್ಟು ಸದಸ್ಯರ ಮೂರನೇ ಒಂದು ಭಾಗದಷ್ಟು ಸದಸ್ಯರು ಕೋರಂ ಆಗತಕ್ಕದ್ದು ಮತ್ತು ವ್ಯವಸ್ಥಾಪನಾ ಮಂಡಳಿಯ ಎಲ್ಲಾ ತೀರ್ಮಾನಗಳನ್ನು ಹಾಜರಿದ್ದ ಸದಸ್ಯರ ಬಹುಮತದಿಂದ ತೀರ್ಮಾನಿಸತಕ್ಕದ್ದು.

(7) ಮಂಡಳಿಯ ಯಾವುದೇ ಕಾರ್ಯ ಅಥವಾ ವ್ಯವಹರಣೆಗಳನ್ನು, ಮಂಡಳಿಯ ರಚನೆಯಲ್ಲಿಯ ಯಾವುದೇ ಖಾಲಿ ಸ್ಥಾನದ ಅಥವಾ ಯಾವುದೇ ನ್ಯೂನತೆಯ ಕಾರಣ ಮಾತ್ರದಿಂದಲೇ ಪ್ರಶ್ನಿಸತಕ್ಕದ್ದಲ್ಲ.

(8) ಮಂಡಳಿಯ ಎಲ್ಲಾ ಆದೇಶಗಳು ಮತ್ತು ತೀರ್ಮಾನಗಳನ್ನು ಹಾಗೂ ಇದು ಹೊರಡಿಸಿದ ಎಲ್ಲಾ ಇತರ ಲಿಖಿತ ಪತ್ರ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯ ಸಹಿಯ ಮೂಲಕ ಅಧಿಪ್ರಮಾಣಿಕರಿಸತಕ್ಕದ್ದು.

**9. ಮಂಡಳಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯ ನೇಮಕ.–** ರಾಜ್ಯ ಸರ್ಕಾರವು ಭಾರತದ ಆಡಳಿತ ಸೇವೆಯ ಶ್ರೇಣಿಗೆ ಸೇರಿರುವ ಒಬ್ಬರು ಅಧಿಕಾರಿಯನ್ನು ಮಂಡಳಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯನ್ನಾಗಿ ನೇಮಕ ಮಾಡತಕ್ಕದ್ದು. ಮುಖ್ಯ ಕಾರ್ಯ ನಿರ್ವಹಣಾ ಅಧಿಕಾರಿಯು ಮಂಡಳಿಯ ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು.

**10. ಮಂಡಳಿಯ ಮುಖ್ಯ ಕಾರ್ಯನಿರ್ವಹಣಾಧಿಕಾರಿಯ ಪ್ರಕಾರ್ಯಗಳು, ಅಧಿಕಾರಗಳು ಮತ್ತು ಕರ್ತವ್ಯಗಳು.–** (1) ಅಧಿನಿಯಮದ ಮತ್ತು ಅದರಡಿಯಲ್ಲಿ ರಚಿಸಲಾದ ನಿಯಮಗಳ ಉಪಬಂಧಗಳಿಗೆ ಒಳಪಟ್ಟು, ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯು,–

(ಎ) ಮಂಡಳಿಯ ಉಪಾಧ್ಯಕ್ಷರ ಸಾಮಾನ್ಯ ಮೇಲ್ವಿಚಾರಣೆ ಮತ್ತು ನಿಯಂತ್ರಣಕ್ಕೆ ಒಳಪಟ್ಟು, ಮಂಡಳಿಯ ಅಧಿಕಾರಿಗಳು ಮತ್ತು ಸಿಬ್ಬಂದಿಗಳ ಮೇಲೆ ಆಡಳಿತಾತ್ಮಕ ನಿಯಂತ್ರಣವನ್ನು ಚಲಾಯಿಸತಕ್ಕದ್ದು;

(ಬಿ) ಮಂಡಳಿಯು ಆತನಿಗೆ ವಹಿಸಿಕೊಟ್ಟ ಎಲ್ಲಾ ಕಾರ್ಯಗಳ ನಿರ್ವಹಣೆಯ ಮೇಲ್ವಿಚಾರಣೆ ಮತ್ತು ನಿಯಂತ್ರಣವನ್ನು ಹೊಂದಿರತಕ್ಕದ್ದು;

(ಸಿ) ಮಂಡಳಿಯ ಸಭೆಗಳ ನಡವಳಿಗಳಿಗೆ ಸಂಬಂಧಪಟ್ಟ ಎಲ್ಲಾ ಕಾಗದಗಳ ಮತ್ತು ದಾಖಲೆಗಳ ಅಭಿರಕ್ಷೆಯನ್ನು ಹೊಂದಿರತಕ್ಕದ್ದು;

(ಡಿ) ಮಂಡಳಿಯ ನಿಧಿಯಿಂದ ಹಣವನ್ನು ತೆಗೆಯತಕ್ಕದ್ದು ಮತ್ತು ಬಟವಾಡೆ ಮಾಡತಕ್ಕದ್ದು; ಮತ್ತು

(ಇ) ನಿಯಮಿಸಬಹುದಾದಂಥ ಇತರ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

(2) ಮುಖ್ಯ ಕಾರ್ಯನಿರ್ವಹಣಾಧಿಕಾರಿಯು ಮಂಡಳಿಯ ಪ್ರತಿಯೊಂದು ಸಭೆಗೂ ಹಾಜರಾಗತಕ್ಕದ್ದು ಮತ್ತು ಅಂಥ ಸಭೆಯ ನಡವಳಿಗಳನ್ನು ದಾಖಲ್ಮಾಡುವಂತೆ ಮಾಡತಕ್ಕದ್ದು.

**11. ಮಂಡಳಿಯ ಅಧಿಕಾರಿಗಳು ಮತ್ತು ಸಿಬ್ಬಂದಿ.–** (1) ನಿರ್ದಿಷ್ಟ ಪಡಿಸಬಹುದಾದಂಥ ವಿನಿಯಮಗಳಿಗೆ ಒಳಪಟ್ಟು, ಮಂಡಳಿಯು, ತನ್ನ ಉದ್ದೇಶಕ್ಕಾಗಿ ಅವಶ್ಯವಾದಂಥ ಅಧಿಕಾರಿಗಳು ಮತ್ತು ಸಿಬ್ಬಂದಿಯನ್ನು ನೇಮಕ ಮಾಡಬಹುದು.

(2) (1)ನೇ ಉಪ ಪ್ರಕರಣದಲ್ಲಿ ಉಲ್ಲೇಖಿಸಲಾದ ಅಧಿಕಾರಿಗಳು ಮತ್ತು ಸಿಬ್ಬಂದಿಗಳ ಸೇವಾ ಉಪಲಬ್ಧಿಗಳು, ಭತ್ಯೆಗಳು ಮತ್ತು ಇತರ ಷರತ್ತುಗಳು, ವಿನಿಯಮಗಳ ಅಡಿಯಲ್ಲಿ ಮಂಡಳಿಯು ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು.

**12. ರಾಜ್ಯ ಮಟ್ಟದ ಅಧಿಕಾರವುಳ್ಳ ಸಮಿತಿಯ ರಚನೆ ಮತ್ತು ಅದರ ಪ್ರಕಾರ್ಯಗಳು.–** ರಾಜ್ಯ ಸರ್ಕಾರವು, ಈ ಮುಂದಿನವರನ್ನು ಒಳಗೊಂಡ, ಒಂದು ರಾಜ್ಯ ಮಟ್ಟದ ಅಧಿಕಾರವುಳ್ಳ ಸಮಿತಿಯನ್ನು ರಚಿಸತಕ್ಕದ್ದು, ಎಂದರೆ:–

| | |
|---|---|
| (ಎ) ಮಾನ್ಯ ಮುಖ್ಯ ಮಂತ್ರಿಗಳು | – ಅಧ್ಯಕ್ಷರು |
| (ಬಿ) ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನದ ಪ್ರಭಾರದಲ್ಲಿರುವ ಸಚಿವರು | – ಉಪಾಧ್ಯಕ್ಷರು |
| (ಸಿ) ಬೃಹತ್ ಮತ್ತು ಮಧ್ಯಮ ಕೈಗಾರಿಕೆಗಳ ಪ್ರಭಾರದಲ್ಲಿರುವ ಸಚಿವರು | – ಸದಸ್ಯರು |
| (ಡಿ) ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿಗಳು | – ಸದಸ್ಯರು |
| (ಇ) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ | – ಸದಸ್ಯ ಕಾರ್ಯದರ್ಶಿ |

(2) ರಾಜ್ಯ ಮಟ್ಟದ ಅಧಿಕಾರವುಳ್ಳ ಸಮಿತಿಯು ಈ ಮುಂದಿನ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು, ಎಂದರೆ:–

(ಎ) ಇದು, ಪ್ರತಿಯೊಂದು ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶದ ಪ್ರಕಾರ್ಯಗಳ ಮತ್ತು ನಿರ್ವಹಣೆಯ ಮೇಲ್ವಿಚಾರಣೆ, ಪುನರೀಕ್ಷಣೆ ಮತ್ತು ಮೌಲ್ಯಮಾಪನ ಮಾಡತಕ್ಕದ್ದು; ಮತ್ತು

(ಬಿ) ಸ್ಟೇಕ್ ಹೋಲ್ಡರುಗಳ ನಡುವಿನ ವಿವಾದಗಳಿಗೆ ಸಂಬಂಧಪಟ್ಟ ವಿಷಯಗಳ ಬಗ್ಗೆ ವ್ಯವಹರಿಸುವುದು; ಮತ್ತು

(ಸಿ) ನಿಯಮಿಸಬಹುದಾದ ಯಾವುದೇ ಇತರ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

## ಅಧ್ಯಾಯ – V

## ಮಂಡಳಿಯ ನಿಧಿ

**13. ಮಂಡಳಿಯ ನಿಧಿ.–** (1) ಮಂಡಳಿಯು, ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶ ನಿಧಿ ಎಂದು ಕರೆಯಲಾಗುವ ನಿಧಿಯನ್ನು ಹೊಂದಿರತಕ್ಕದ್ದು.

(2) ಮಂಡಳಿಯು, ಈ ಅಧಿನಿಯಮದ ಎಲ್ಲಾ ಅಥವಾ ಯಾವುವೇ ಉದ್ದೇಶಗಳಿಗಾಗಿ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರ ಅಥವಾ ಒಂದು ಸ್ಥಳೀಯ ಪ್ರಾಧಿಕಾರ ಅಥವಾ ಯಾವೊಬ್ಬ ವ್ಯಕ್ತಿ ಅಥವಾ ನಿಗಮಿತವಾಗಿರುವ ಅಥವಾ ಆಗದಿರುವ ನಿಕಾಯದಿಂದ ಅನುದಾನಗಳು, ಧನಸಹಾಯಗಳು, ದೇಣಿಗೆಗಳು ಮತ್ತು ದಾನಗಳನ್ನು ಸ್ವೀಕರಿಸಬಹುದು.

(3) ಈ ಅಧಿನಿಯಮದ ಬಲದಿಂದಾಗಿ ಮಂಡಳಿಯು ಅಥವಾ ಅದರ ಪರವಾಗಿ ಸ್ವೀಕರಿಸಲಾದ ಎಲ್ಲಾ ಹಣ, ಮಂಡಳಿಯು ಮಾರಾಟಮಾಡಿದ ಭೂಮಿ ಅಥವಾ ಯಾವುದೇ ಇತರ ವಸ್ತು ಅಥವಾ ಸ್ವತ್ತಿನ ಉತ್ಪತ್ತಿ, ಮಂಡಳಿಗೆ ಪ್ರಾಪ್ತವಾಗುವ ಎಲ್ಲಾ ಬಾಡಿಗೆಗಳು, ಮತ್ತು ಎಲ್ಲಾ ಬಡ್ಡಿಗಳು, ಲಾಭಗಳು ಮತ್ತು ಇತರ ಹಣ, ಇವು ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶ ನಿಧಿಯಾಗಿರತಕ್ಕದ್ದು.

(4) ರಾಜ್ಯ ಸರ್ಕಾರವು ಅನ್ಯಥಾ ನಿರ್ದೇಶಿಸಿದ ಹೊರತು, ಪೂರ್ವೋಕ್ತ ಉಪಬಂಧಗಳಲ್ಲಿ ನಿರ್ದಿಷ್ಟ ಪಡಿಸಲಾದ ಮತ್ತು ಮಂಡಳಿಯ ನಿಧಿಯ ಭಾಗವಾಗಿರುವ ಎಲ್ಲಾ ಹಣ ಮತ್ತು ಸ್ವೀಕೃತಿಗಳನ್ನು ಭಾರತೀಯ ರಿಸರ್ವ್ ಬ್ಯಾಂಕು ಅಥವಾ ಯಾವುದೇ ಅನುಸೂಚಿತ ಬ್ಯಾಂಕುಗಳಲ್ಲಿ ಠೇವಣಿ ಇಡತಕ್ಕದ್ದು ಅಥವಾ ರಾಜ್ಯ ಸರ್ಕಾರವು ಅನುಮೋದಿಸಬಹುದಾದಂಥ ಭದ್ರತೆಗಳಲ್ಲಿ ಹೂಡಿಕೆ ಮಾಡತಕ್ಕದ್ದು.

**14. ನಿಧಿಯ ವಿನಿಯೋಗ.–** ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ಮಂಡಳಿಯ ಎಲ್ಲಾ ಸ್ವತ್ತು ಮತ್ತು ನಿಧಿಗಳು ಹಾಗೂ ಮಂಡಳಿಯಲ್ಲಿ ನಿಹಿತವಾಗುವ ಇತರ ಎಲ್ಲಾ ಆಸ್ತಿಗಳನ್ನು ಈ ಅಧಿನಿಯಮದ ಉದ್ದೇಶಗಳಿಗಾಗಿ ಧಾರಣಮಾಡತಕ್ಕದ್ದು ಮತ್ತು ವಿನಿಯೋಗಿಸತಕ್ಕದ್ದು.

**15. ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ.–** (1) ಮಂಡಳಿಯು, ಈ ಅಧಿನಿಯಮದಡಿಯಲ್ಲಿನ ನಿಯಮಗಳು ಅಗತ್ಯಪಡಿಸಬಹುದಾದಂತೆ ಸರಿಯಾದ ಲೆಕ್ಕ ಪುಸ್ತಕಗಳನ್ನು ಮತ್ತು ಇತರ ಪುಸ್ತಕಗಳನ್ನು ನಿರ್ವಹಿಸತಕ್ಕದ್ದು ಮತ್ತು ಅಂಥ ನಿಯಮಗಳಿಗನುಸಾರ ಒಂದು ವಾರ್ಷಿಕ ಲೆಕ್ಕ ವಿವರಣಾ ಪತ್ರವನ್ನು ತಯಾರಿಸತಕ್ಕದ್ದು.

(2) ಮಂಡಳಿಯು ರಾಜ್ಯ ಸರ್ಕಾರವು ನಿರ್ದೇಶಿಸಬಹುದಾದಂಥ ವ್ಯಕ್ತಿಗಳಿಂದ ತನ್ನ ವಾರ್ಷಿಕ ಲೆಕ್ಕಪತ್ರಗಳನ್ನು ಲೆಕ್ಕ ಪರಿಶೋಧನೆ ಮಾಡಿಸತಕ್ಕದ್ದು.

(3) ಮಂಡಳಿಯ ಲೆಕ್ಕಪತ್ರಗಳನ್ನು ಪರಿಶೋಧಿಸಿದ ತರುವಾಯ ಆದಷ್ಟು ಬೇಗನೆ ಮಂಡಳಿಯು ಅದರ ಪ್ರತಿಯನ್ನು ಲೆಕ್ಕಪರಿಶೋಧಕರ ವರದಿಯ ಪ್ರತಿಯೊಂದಿಗೆ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು ಮತ್ತು ನಿಯಮಿಸಲಾದ ರೀತಿಯಲ್ಲಿ ಲೆಕ್ಕಪತ್ರಗಳನ್ನು ಪ್ರಕಟಿಸುವಂತೆ ಮಾಡತಕ್ಕದ್ದು ಮತ್ತು ಅದರ ಪ್ರತಿಗಳನ್ನು ಸೂಕ್ತ ಬೆಲೆಗೆ ಮಾರಾಟಕ್ಕೆ ಇಡತಕ್ಕದ್ದು. ರಾಜ್ಯ ಸರ್ಕಾರದಿಂದ ಅವುಗಳನ್ನು ಸ್ವೀಕರಿಸಿದ ತರುವಾಯ ಆದಷ್ಟು ಬೇಗನೆ, ಲೆಕ್ಕಪರಿಶೋಧಿತ ಲೆಕ್ಕಪತ್ರಗಳು ಮತ್ತು ವರದಿಯನ್ನು ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ ಮಂಡಿಸತಕ್ಕದ್ದು.

(4) ರಾಜ್ಯ ಸರ್ಕಾರವು, ಲೆಕ್ಕಪತ್ರಗಳನ್ನು ಮತ್ತು ಲೆಕ್ಕಪರಿಶೋಧಕರ ವರದಿಯನ್ನು ಪರಿಶೀಲಿಸಿದ ತರುವಾಯ, ನೀಡಬಹುದಾದಂಥ ನಿರ್ದೇಶನಗಳನ್ನು ಮಂಡಳಿಯು ಪಾಲಿಸತಕ್ಕದ್ದು.

**16. ವಾರ್ಷಿಕ ವರದಿ.–** ಮಂಡಳಿಯು, ಪ್ರತಿವರ್ಷದ ಮುಕ್ತಾಯದ ತರುವಾಯ, ನಿಯಮಿಸಬಹುದಾದಂಥ ನಮೂನೆಯಲ್ಲಿ ಮತ್ತು ಅಂಥ ದಿನಾಂಕದೊಳಗೆ, ಅಂಥ ವರ್ಷದ ಅವಧಿಯಲ್ಲಿ ತನ್ನ ಚಟುವಟಿಕೆಗಳ ಒಂದು ವರದಿಯನ್ನು ತಯಾರಿಸತಕ್ಕದ್ದು ಹಾಗೂ ಅದನ್ನು ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು ಮತ್ತು ರಾಜ್ಯ ಸರ್ಕಾರವು ಅಂಥ ವರದಿಯ ಪ್ರತಿಯನ್ನು ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸುವಂತೆ ಮಾಡತಕ್ಕದ್ದು.

## ಅಧ್ಯಾಯ – VI

## ದಂಡಗಳು

**17. ದಂಡಗಳು.–** (1) ಮಂಡಳಿಯು, ಯಾವುದೇ ಸಮಯದಲ್ಲಿ ಅಭಿವೃದ್ಧಿಗಾರನು,–

(ಎ) ಈ ಅಧಿನಿಯಮದ ಅಥವಾ ಅದರಡಿಯಲ್ಲಿ ರಚಿಸಲಾದ ನಿಯಮಗಳ ಉಪಬಂಧಗಳಡಿಯಲ್ಲಿ, ಆತನಿಗೆ ವಿಧಿಸಲಾದ ಪ್ರಕಾರ್ಯಗಳನ್ನು ನಿರ್ವಹಿಸಲು ಅಥವಾ ಕರ್ತವ್ಯಗಳನ್ನು ನೆರವೇರಿಸಲು ಅಸಮರ್ಥನೆಂದು; ಅಥವಾ

(ಬಿ) ಈ ಅಧಿನಿಯಮದಡಿಯಲ್ಲಿ ನೀಡಲಾದ ಯಾವುದೇ ನಿರ್ದೇಶನವನ್ನು ಪಾಲಿಸುವುದಕ್ಕೆ ನಿರಂತರವಾಗಿ ತಪ್ಪಿರುವನೆಂದು; ಅಥವಾ

(ಸಿ) ಒಪ್ಪಂದದ ನಿಬಂಧನೆಗಳನ್ನು ಮತ್ತು ಷರತ್ತುಗಳನ್ನು ಉಲ್ಲಂಘಿಸಿರುವನೆಂದು; ಅಥವಾ

(ಡಿ) ಒಪ್ಪಂದದ ಮೂಲಕ ವಿಧಿಸಲಾದ ಕರ್ತವ್ಯಗಳನ್ನು ಮತ್ತು ಹೊಣೆಗಾರಿಕೆಗಳನ್ನು ಆತನ ಹಣಕಾಸು ಪರಿಸ್ಥಿತಿಯು ಸಂಪೂರ್ಣವಾಗಿ ಮತ್ತು ಸಮರ್ಪಕವಾಗಿ ನೆರವೇರಿಸಲು ಅಸಮರ್ಥನನ್ನಾಗಿ ಮಾಡಿದೆ ಎಂದು ಹಾಗೂ ಸಾರ್ವಜನಿಕ ಹಿತಾಸಕ್ತಿಯಲ್ಲಿ, ಹಾಗೆ ಮಾಡುವುದನ್ನು ಅವಶ್ಯಕಗೊಳಿಸುವಂಥ ಸನ್ನಿವೇಶಗಳು ಉಂಟಾಗಿವೆಯೆಂದು,

– ಅಭಿಪ್ರಾಯಪಟ್ಟಲ್ಲಿ, ಮಂಡಳಿಯು, ಅರ್ಜಿಯ ಮೇಲೆ, ಅಥವಾ ಅಭಿವೃದ್ಧಿಗಾರನ ಒಪ್ಪಿಗೆಯಿಂದ ಅಥವಾ ಇಲ್ಲದೇ, ಲಿಖಿತದಲ್ಲಿ ಕಾರಣಗಳನ್ನು ದಾಖಲಿಸಿ, ಅಭಿವೃದ್ಧಿಗಾರನಿಗೆ ಮಂಜೂರಾಗಿದ್ದ ಒಪ್ಪಂದವನ್ನು ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶದಲ್ಲಿ ಸ್ಥಾಪಿಸಲಾದ ತನ್ನ ಪ್ರದೇಶದಲ್ಲಿ ಪೂರ್ಣ ಅಥವಾ ಭಾಗಕ್ಕಾಗಿ ಒಂದು ವರ್ಷಕ್ಕೆ ಮೀರದ ಅವಧಿಯವರೆಗೆ ಅಮಾನತ್ತುಗೊಳಿಸಬಹುದು ಮತ್ತು (2)ನೇ ಉಪ ಪ್ರಕರಣದಡಿಯಲ್ಲಿ ಹೇಳಿರುವಂತೆ ಸಹ ಮುಂದುವರೆಯಬಹುದು.

(2) ಈ ಅಧಿನಿಯಮ ಅಥವಾ ಅದರಡಿಯಲ್ಲಿ ರಚಿಸಲಾದ ನಿಯಮಗಳು ಅಥವಾ ವಿನಿಯಮಗಳ ಉಪಬಂಧಗಳನ್ನು ಉಲ್ಲಂಘಿಸುವ ಯಾರೊಬ್ಬರು, ಅಪರಾಧ ನಿರ್ಣಯವಾದ ಮೇಲೆ, ಆತನು, ಒಂದು ತಿಂಗಳವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಐವತ್ತು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯೊಂದಿಗೆ ದಂಡಿತನಾಗತಕ್ಕದ್ದು.

(3) (2)ನೇ ಉಪ ಪ್ರಕರಣದ ಅಡಿಯಲ್ಲಿ ಅಪರಾಧ ನಿರ್ಣೀತನಾದ ಒಬ್ಬ ವ್ಯಕ್ತಿಯು, ಮಂಡಳಿಗೆ ಉಂಟಾದ ನಷ್ಟವನ್ನು ತುಂಬಿಕೊಡಲು ಬದ್ಧನಾಗಿರತಕ್ಕದ್ದು, ತಪ್ಪಿದಲ್ಲಿ ಮೊತ್ತವನ್ನು ಅಂಥ ವ್ಯಕ್ತಿಯಿಂದ ಭೂ ಕಂದಾಯ ಬಾಕಿಗಳಂತೆ ವಸೂಲ್ಮಾಡಬಹುದು.

**18. ಗುತ್ತಿಗೆಯ ನಿಬಂಧನೆಗಳನ್ನು ಅಥವಾ ಷರತ್ತುಗಳನ್ನು ಉಲ್ಲಂಘಿಸಿದಾಗ ಅಥವಾ ಅಧಿಕಾರವಿಲ್ಲದೇ ಅವುಗಳನ್ನು ಧಾರಣ ಮಾಡಿದಾಗ ವಾಸಸ್ಥಳದ ಸ್ವತ್ತುಗಳು ಒಳಗೊಂಡಂತೆ ಆವರಣಗಳ ಸ್ವಾಧೀನತೆಯನ್ನು ಪುನರಾರಂಭಿಸುವುದು.–** (1) ಒಂದು ಕೈಗಾರಿಕಾ ಪ್ರದೇಶದಲ್ಲಿ ಅಥವಾ ಕೈಗಾರಿಕಾ ಎಸ್ಟೇಟಿನಲ್ಲಿ ಯಾವುವೇ ಆವರಣಗಳ ಅಥವಾ ಅದರ ಭಾಗದ ಅಥವಾ ವಾಸಸ್ಥಳದ ಸ್ವತ್ತಿನ ಹಂಚಿಕೆ ಪಡೆದವನು, ಹಂಚಿಕೆಯ ಯಾವುವೇ ನಿಬಂಧನೆಗಳನ್ನು ಅಥವಾ ಷರತ್ತುಗಳನ್ನು ಉಲ್ಲಂಘಿಸಿರುವನೆಂದು ಅಥವಾ ಯಾವುದೇ ಅಧಿಕಾರವಿಲ್ಲದೇ ಅದನ್ನು ಧಾರಣ ಮಾಡಿರುವನೆಂದು ಮಂಡಳಿಯು ಅಭಿಪ್ರಾಯ ಪಟ್ಟಲ್ಲಿ, ಅದು, 17ನೇ ಪ್ರಕರಣಕ್ಕೆ ಪ್ರತಿಕೂಲವಾಗದಂತೆ, ಅಂಥ ಹಂಚಿಕೆ ಪಡೆದವನಿಗೆ ಮತ್ತು ಯಾರ ಪರವಾಗಿ, ಮಂಡಳಿಯು ಆವರಣಗಳ ಅಥವಾ ವಾಸಸ್ಥಳದ

ಸ್ವತ್ತಿನ, ಅಡಮಾನ ಅಥವಾ ಗುತ್ತಿಗೆ ಧಾರಣಾಧಿಕಾರಕ್ಕೆ ಅನುಮತಿ ನೀಡಿದೆಯೋ ಆ ಬ್ಯಾಂಕು ಅಥವಾ ಹಣಕಾಸು ಸಂಸ್ಥೆಗಳಿಗೆ ಹಂಚಿಕೆಯ ನಿಬಂಧನೆಗಳ ಮತ್ತು ಷರತ್ತುಗಳ ಉಲ್ಲಂಘನೆಯನ್ನು ನಿರ್ದಿಷ್ಟಪಡಿಸಿ, ಮಂಡಳಿಯು ನೋಟೀಸಿನಲ್ಲಿ ಗೊತ್ತುಪಡಿಸಿದ ಅವಧಿಯೊಳಗೆ, ಅಂಥ ಉಲ್ಲಂಘನೆಗಳಿಗೆ ಪರಿಹಾರ ನೀಡುವಂತೆ ಹಂಚಿಕೆ ಪಡೆದವನನ್ನು ಕೋರುವ ನೋಟೀಸನ್ನು ನೀಡತಕ್ಕದ್ದು.

(2) ಹಾಗೆ ಗೊತ್ತುಪಡಿಸಲಾದ ಅವಧಿಯೊಳಗೆ ಹಂಚಿಕೆ ಪಡೆದವನು, ಉಲ್ಲಂಘನೆಗಳಿಗಾಗಿ ಪರಿಹಾರವನ್ನು ನೀಡಲು ತಪ್ಪಿದಲ್ಲಿ, ಮಂಡಳಿಯು, ಆವರಣಗಳ ಅಥವಾ ಅದರ ಭಾಗದ ಅಥವಾ ವಾಸಸ್ಥಳ ಸ್ವತ್ತಿನ ಸ್ವಾಧೀನವನ್ನು ಏಕೆ ಪುನರಾರಂಭಿಸಬಾರದು ಎಂದು ಜಾರಿಗೊಳಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ ಕಾರಣ ತೋರಿಸುವಂತೆ ನೋಟೀಸನ್ನು, ಅಂಥ ಬ್ಯಾಂಕು ಅಥವಾ ಹಣಕಾಸು ಸಂಸ್ಥೆಗಳಿಗೆ ತಿಳಿಸಿ, ಹಂಚಿಕೆ ಪಡೆದವನಿಗೆ, ನೋಟೀಸನ್ನು ಜಾರಿ ಮಾಡತಕ್ಕದ್ದು.

(3) ಹಂಚಿಕೆ ಪಡೆದವನು ಯಾವುದಾದರೂ ಕಾರಣವನ್ನು ನೀಡಿದ್ದಲ್ಲಿ, ಅದನ್ನು ಪರಿಗಣಿಸಿದ ತರುವಾಯ ಮತ್ತು ಆತನಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ಕೊಟ್ಟ ತರುವಾಯ, ಮಂಡಳಿಯು, ತಾನು ಸೂಕ್ತವೆಂದು ಭಾವಿಸುವ ಅಂಥ ಆದೇಶಗಳನ್ನು ಹೊರಡಿಸಬಹುದು.

(4) ಮಂಡಳಿಯು, (3)ನೇ ಉಪ ಪ್ರಕರಣದ ಅಡಿಯಲ್ಲಿ ಒಂದು ಆದೇಶವನ್ನು ಹೊರಡಿಸಿದಲ್ಲಿ, ಕೈಗಾರಿಕಾ ಪ್ರದೇಶದಲ್ಲಿನ ವಾಸಸ್ಥಳ ಸ್ವತ್ತು ಒಳಗೊಂಡಂತೆ ಆವರಣಗಳ ಅಥವಾ ಅದರ ಭಾಗದ ಸ್ವಾಧೀನತೆಯನ್ನು ಪುನರಾರಂಭಿಸುವುದಕ್ಕಾಗಿ, ಅದು, ಲಿಖಿತ ನೋಟೀಸಿನ ಮೂಲಕ, ಯಾವೊಬ್ಬ ಹಂಚಿಕೆ ಪಡೆದವನಿಗೆ, ನೋಟಿಸಿನಲ್ಲಿ ನಿರ್ದಿಷ್ಟಪಡಿಸಲಾದ ದಿನಾಂಕದೊಳಗೆ ಮಂಡಳಿಗೆ ಅಥವಾ ಈ ಬಗ್ಗೆ ಅಧಿಕೃತನಾದ ಯಾವೊಬ್ಬ ವ್ಯಕ್ತಿಗೆ, ಬಿಟ್ಟುಕೊಡುವಂತೆ ಅಥವಾ ಅದರ ಸ್ವಾಧೀನತೆಯನ್ನು ಒಪ್ಪಿಸುವಂತೆ ಆದೇಶ ನೀಡಬಹುದು.

(5) ಯಾವೊಬ್ಬ ಹಂಚಿಕೆ ಪಡೆದವನು, ನೋಟೀಸಿನಲ್ಲಿ ನಿರ್ದಿಷ್ಟ ಪಡಿಸಲಾದ ಅವಧಿಯೊಳಗೆ, ವಾಸಸ್ಥಳ ಸ್ವತ್ತು ಒಳಗೊಂಡಂತೆ ಆವರಣಗಳ ಅಥವಾ ಅದರ ಭಾಗದ ಸ್ವಾಧೀನತೆಯನ್ನು ಬಿಟ್ಟುಕೊಡಲು ಅಥವಾ ಒಪ್ಪಿಸಲು ನಿರಾಕರಿಸಿದಲ್ಲಿ, ಮಂಡಳಿಯು ಅಥವಾ ಈ ಸಂಬಂಧದಲ್ಲಿ ಅದರಿಂದ ಅಧಿಕೃತನಾದ ಯಾವೊಬ್ಬ ಅಧಿಕಾರಿಯು, ಎಲ್ಲಾ ಋಣಗಳಿಂದ ಮುಕ್ತವಾದ, ವಾಸಸ್ಥಳ ಸ್ವತ್ತು ಒಳಗೊಂಡ ಆವರಣಗಳ ಅಥವಾ ಅದರ ಭಾಗದ ಸ್ವಾಧೀನತೆಯನ್ನು ಪುನರಾರಂಭಿಸಬಹುದು ಮತ್ತು ಈ ಉದ್ದೇಶಕ್ಕಾಗಿ ಅವಶ್ಯವಾಗಬಹುದಾದಂಥ ಬಲವನ್ನು ಉಪಯೋಗಿಸಬಹುದು.

**19. ವಿವಾದವನ್ನು ಒಪ್ಪಿಸುವುದು.–** (1) ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶದಲ್ಲಿ, ಮಂಡಳಿ ಮತ್ತು ಅಭಿವೃದ್ಧಿದಾರರು ಅಥವಾ ಸಹ–ಅಭಿವೃದ್ಧಿದಾರರು ಅಥವಾ ಘಟಕಗಳು ಅಥವಾ ಉದ್ದಿಮೆದಾರರು ಇವರುಗಳ ನಡುವೆ, ಇಬ್ಬರು ಅಥವಾ ಹೆಚ್ಚಿನ ಅಭಿವೃದ್ಧಿದಾರರು, ಸಹ ಅಭಿವೃದ್ಧಿದಾರರಲ್ಲಿ ಅಥವಾ ಅಭಿವೃದ್ಧಿದಾರ ಮತ್ತು ಉದ್ದಿಮೆದಾರರು ಅಥವಾ ಘಟಕಗಳ ನಡುವೆ ಸಿವಿಲ್ ಸ್ವರೂಪದ ಯಾವುದೇ ವಿವಾದವು ಉದ್ಭವಿಸಿದಲ್ಲಿ, ಅಂಥಾ ವಿವಾದವನ್ನು ಒಬ್ಬರು ಮಧ್ಯಸ್ಥಗಾರರಿಗೆ ಒಪ್ಪಿಸತಕ್ಕದ್ದು.

(2) ಮಧ್ಯಸ್ಥಗಾರಿಕೆ ಮತ್ತು ಸಂಧಾನ ಅಧಿನಿಯಮ, 1996ರ ಉಪಬಂಧಗಳು ಮಧ್ಯಸ್ಥಗಾರಿಕೆ ಮತ್ತು ಸಂಧಾನ ಅಧಿನಿಯಮ, 1996ರ ಉಪಬಂಧಗಳ ಅಡಿಯಲ್ಲಿಯ ಇತ್ಯರ್ಥ ಅಥವಾ ತೀರ್ಮಾನದಲ್ಲಿ ಉಲ್ಲೇಖವಾದ ಮಧ್ಯಸ್ಥಗಾರಿಕೆಯ ನಡವಳಿಗಳಾಗಿದ್ದರೆ ಹೇಗೋ ಹಾಗೆ ಈ ಅಧಿನಿಯಮದಡಿಯ ಎಲ್ಲಾ ಮಧ್ಯಸ್ಥಗಾರಿಕೆಗೆ, ಅನ್ವಯವಾಗತಕ್ಕದ್ದು.

(3) ಮಧ್ಯಸ್ಥಗಾರಿಕೆಗೆ ಒಪ್ಪಿಸಬೇಕಾದ ಯಾವುದೇ ವಿವಾದದ ಸಂದರ್ಭದಲ್ಲಿ ಕಾಲಮಿತಿಯು, ವಿವಾದವು ಒಂದು ದಾವೆ ಹಾಗೂ ಮಧ್ಯಸ್ಥಗಾರನು ಒಂದು ಸಿವಿಲ್ ನ್ಯಾಯಾಲಯವಾಗಿದ್ದರೆ ಹೇಗೋ ಹಾಗೆ ಅವಧಿ ಪರಿಮಿತಿ ಅಧಿನಿಯಮ, 1963ರ ಉಪಬಂಧಗಳ ಮೂಲಕ ನಿಯಂತ್ರಿತವಾಗತಕ್ಕದ್ದು.

**20. ಕಂಪೆನಿಗಳಿಂದ ಅಪರಾಧಗಳು.–** (1) ಈ ಅಧಿನಿಯಮದ ಅಡಿಯಲ್ಲಿ ಒಂದು ಅಪರಾಧವನ್ನು ಮಾಡುವ ವ್ಯಕ್ತಿಯು ಒಂದು ಕಂಪೆನಿಯಾಗಿದ್ದರೆ, ಅಪರಾಧ ನಡೆದ ಕಾಲದಲ್ಲಿ ಕಂಪೆನಿಯ ಆಡಳಿತವನ್ನು ಹೊಂದಿದ್ದ ಮತ್ತು ಅದರ ವ್ಯವಹಾರಗಳನ್ನು ನಡೆಸುವ ಬಗ್ಗೆ ಕಂಪೆನಿಗೆ ಹೊಣೆಗಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯನ್ನು ಹಾಗೂ ಕಂಪೆನಿಯನ್ನು ಆ ಅಪರಾಧದ ಬಗ್ಗೆ ತಪ್ಪಿತಸ್ಥರೆಂದು ಭಾವಿಸತಕ್ಕದ್ದು ಮತ್ತು ಅವರ ವಿರುದ್ಧ ವ್ಯವಹರಣೆ ನಡೆಸುವುದಕ್ಕೆ ಹಾಗೂ ಅದಕ್ಕನುಸಾರವಾಗಿ ದಂಡನೆಗೆ ಅವರು ಗುರಿಯಾಗತಕ್ಕದ್ದು:

ಪರಂತು, ಈ ಉಪ–ಪ್ರಕರಣದಲ್ಲಿ ಇರುವುದು ಯಾವುದೂ, ಅಪರಾಧವು ತನ್ನ ಗಮನಕ್ಕೆ ಬರದೇ ನಡೆಯಿತೆಂದು ಅಥವಾ ಅಂಥ ಅಪರಾಧವು ನಡೆಯುವುದನ್ನು ತಡೆಗಟ್ಟಲು ತಾನು ಎಲ್ಲಾ ಯುಕ್ತ ಜಾಗರೂಕತೆಯನ್ನು ವಹಿಸಿದ್ದೆನೆಂದು ಅಂಥ ವ್ಯಕ್ತಿಯು ರುಜುವಾತುಪಡಿಸಿದರೆ, ಅಂಥ ಯಾವೊಬ್ಬ ವ್ಯಕ್ತಿಯನ್ನು ಈ ಅಧಿನಿಯಮದ ಅಡಿಯಲ್ಲಿ ಯಾವುದೇ ದಂಡನೆಗೆ ಗುರಿಯಾಗುವಂತೆ ಮಾಡತಕ್ಕದ್ದಲ್ಲ.

(2) (1)ನೇ ಉಪ–ಪ್ರಕರಣದಲ್ಲಿ ಏನೇ ಇದ್ದರೂ, ಈ ಅಧಿನಿಯಮದ ಅಡಿಯಲ್ಲಿನ ಅಪರಾಧವನ್ನು ಕಂಪನಿಯು ಮಾಡಿರುವಲ್ಲಿ ಮತ್ತು ಆ ಅಪರಾಧವು ಆ ಕಂಪನಿಯ ಯಾವೊಬ್ಬ ನಿರ್ದೇಶಕನ, ವ್ಯವಸ್ಥಾಪಕನ, ಕಾರ್ಯದರ್ಶಿಯ ಅಥವಾ ಇತರ ಅಧಿಕಾರಿಯ ಸಮ್ಮತಿಯಿಂದ ನಡೆಯಿತೆಂದು ಅಥವಾ ಪರೋಕ್ಷ ಸಮ್ಮತಿಯಿಂದ ನಡೆಯಿತೆಂದು ಅಥವಾ ಆ ಅಪರಾಧ

ನಡೆಯುವುದಕ್ಕೆ ಅವನ ಯಾವುದೇ ನಿರ್ಲಕ್ಷತೆ ಕಾರಣವೆಂದು ರುಜುವಾತು ಆದಲ್ಲಿ, ಅಂಥ ನಿರ್ದೇಶಕನು, ವ್ಯವಸ್ಥಾಪಕನು, ಕಾರ್ಯದರ್ಶಿಯು ಅಥವಾ ಇತರ ಅಧಿಕಾರಿಯು ಸಹ ಅಂಥ ಅಪರಾಧದ ದೋಷಿಯೆಂದು ಭಾವಿಸತಕ್ಕದ್ದು ಮತ್ತು ಅವನ ವಿರುದ್ಧ ವ್ಯವಹರಣೆ ನಡೆಸುವುದಕ್ಕೆ ಹಾಗೂ ಅದಕ್ಕನುಸಾರವಾಗಿ ದಂಡನೆಗೆ ಅವನು ಗುರಿಯಾಗತಕ್ಕದ್ದು.

**ವಿವರಣೆ:** ಈ ಪ್ರಕರಣದ ಉದ್ದೇಶಗಳಿಗಾಗಿ,-

(ಎ) **"ಕಂಪನಿ"** ಎಂದರೆ, ಒಂದು ನಿಗಮಿತ ನಿಕಾಯ ಮತ್ತು ಅದು ಫರ್ಮ್‌ನ್ನು ಅಥವಾ ವ್ಯಕ್ತಿಗಳ ಇತರ ಸಂಘವನ್ನು ಒಳಗೊಳ್ಳುತ್ತದೆ; ಮತ್ತು

(ಬಿ) ಫರ್ಮ್‌ನ ಸಂಬಂಧದಲ್ಲಿ **"ನಿರ್ದೇಶಕ"** ಎಂದರೆ, ಆ ಫರ್ಮಿನ ಒಬ್ಬ ಪಾಲುದಾರ.

## ಅಧ್ಯಾಯ - VII

## ಸಂಕೀರ್ಣ

**21. ಮಂಡಳಿಗೆ ಬಾಕಿ ಇರುವ ಮೊಬಲಗನ್ನು ಭೂಕಂದಾಯದ ಬಾಕಿಗಳಂತೆ ವಸೂಲಿ ಮಾಡುವುದು.-** ಯಾವೊಬ್ಬ ವ್ಯಕ್ತಿಯು, ಮಂಡಲಿಗೆ ಸಂದಾಯ ಮಾಡಬೇಕಾದ ಅಥವಾ ಈ ಅಧಿನಿಯಮದ ಅಡಿಯಲ್ಲಿ ಅಥವಾ ಮೂಲಕ ಅದು ವಸೂಲ್ಮಾಡಬೇಕಾದ ಎಲ್ಲಾ ಮೊತ್ತವನ್ನು ಹಾಗೂ ಈ ಸಂಬಂಧದಲ್ಲಿ ಸಂದಾಯ ಮಾಡಿದ ಎಲ್ಲಾ ಶುಲ್ಕಗಳನ್ನು ಅಥವಾ ವಹಿಸಿದ ವೆಚ್ಚಗಳನ್ನು ಯಾವುದೇ ಇತರ ವಸೂಲಿ ಕ್ರಮಕ್ಕೆ ಬಾಧಕವಾಗದಂತೆ, ಮಂಡಲಿಯ ಅರ್ಜಿಯ ಮೇಲೆ, ಭೂ ಕಂದಾಯದ ಬಾಕಿಯಂತೆ ವಸೂಲಿ ಮಾಡತಕ್ಕದ್ದು.

**22. ಅಧಿನಿಯಮವು ಅಧ್ಯಾರೋಹಿ ಪರಿಣಾಮವನ್ನು ಹೊಂದಿರುವುದು.-** ಈ ಅಧಿನಿಯಮದ ಉಪಬಂಧಗಳು, ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನಲ್ಲಿ ಅಥವಾ ಈ ಅಧಿನಿಯಮದ ಹೊರತಾಗಿ ಕಾನೂನಿನ ಬಲವನ್ನು ಹೊಂದಿರುವ ಯಾವುದೇ ಲಿಖಿತ ಪತ್ರದಲ್ಲಿ ಅಸಂಗತವಾದುದು ಏನೇ ಇದ್ದರೂ, ಪರಿಣಾಮಕಾರಿಯಾಗಿರತಕ್ಕದ್ದು.

**23. ಸದ್ಭಾವನೆಯಿಂದ ಕೈಗೊಂಡ ಕ್ರಮಕ್ಕೆ ರಕ್ಷಣೆ.-** ಈ ಅಧಿನಿಯಮದ ಅಡಿಯಲ್ಲಿ ಅಥವಾ ಅದರಡಿಯಲ್ಲಿ ರಚಿಸಿದ ಯಾವುದೇ ನಿಯಮದ ಅಡಿಯಲ್ಲಿ ಸದ್ಭಾವನೆಯಿಂದ ಕೈಗೊಂಡ ಅಥವಾ ಕೈಗೊಳ್ಳಲು ಉದ್ದೇಶಿಸಿದ ಯಾವುದೇ ಕೃತ್ಯಕ್ಕಾಗಿ, ವ್ಯವಸ್ಥಾಪನಾ ಮಂಡಳಿಯ ಅಥವಾ ರಾಜ್ಯಮಟ್ಟದ ಅಧಿಕಾರವುಳ್ಳ ಸಮಿತಿಯ ಅಧ್ಯಕ್ಷ ಅಥವಾ ಇತರ ಸದಸ್ಯರು ಒಳಗೊಂಡಂತೆ, ಯಾವೊಬ್ಬ ವ್ಯಕ್ತಿಯ ವಿರುದ್ಧ ಅಥವಾ ರಾಜ್ಯ ಸರ್ಕಾರದ ವಿರುದ್ಧ ಅಥವಾ ರಾಜ್ಯ ಸರ್ಕಾರದ ಯಾವೊಬ್ಬ ಅಧಿಕಾರಿ ಅಥವಾ ನೌಕರನ ವಿರುದ್ಧ ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆಯನ್ನು ಹೂಡತಕ್ಕದ್ದಲ್ಲ.

**24. ನಿಯಮಗಳ ರಚನಾಧಿಕಾರ.-** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವುದಕ್ಕಾಗಿ ಅಧಿಸೂಚನೆಯ ಮೂಲಕ ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಪ್ರತಿಯೊಂದು ನಿಯಮವನ್ನು, ಅದು ರಚಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಒಂದು ಅಧಿವೇಶನದಲ್ಲಿ ಅಥವಾ ಒಂದಾದ ಮೇಲೊಂದು ಬರುವ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ, ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಅದನ್ನು ಮಂಡಿಸಲಾದ ಅಧಿವೇಶನವು ಅಥವಾ ಅದರ ನಿಕಟ ತರುವಾಯದ ಅಧಿವೇಶನಗಳು ಮುಕ್ತಾಯವಾಗುವ ಮೊದಲು ಆ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಲು ಎರಡೂ ಸದನಗಳು ಒಪ್ಪಿದರೆ ಅಥವಾ ಆ ನಿಯಮಗಳನ್ನು ಮಾಡಕೂಡದೆಂದು ಎರಡೂ ಸದನಗಳು ಒಪ್ಪಿದರೆ, ಆ ತರುವಾಯ ಆ ನಿಯಮವು ಸಂದರ್ಭಾನುಸಾರ, ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ, ಆದರೆ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು, ಆ ನಿಯಮದ ಅಡಿಯಲ್ಲಿ ಹಿಂದೆ ಮಾಡಿದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಪ್ರತಿಕೂಲವಾಗಿರತಕ್ಕದ್ದಲ್ಲ.

**25. ವಿನಿಯಮಗಳ ರಚನಾಧಿಕಾರ.-** ಮಂಡಳಿಯು, ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಡನೆ ಈ ಅಧಿನಿಯಮಕ್ಕೆ ಮತ್ತು ಅದರ ಅಡಿಯಲ್ಲಿ ರಚಿಸಿದ ನಿಯಮಗಳಿಗೆ ಸುಸಂಗತವಾಗಿ ವಿನಿಯಮಗಳನ್ನು ರಚಿಸಬಹುದು, ಅಂಥ ವಿನಿಯಮಗಳು ಈ ಮುಂದಿನವುಗಳಿಗಾಗಿ ಉಪಬಂಧ ಕಲ್ಪಿಸತಕ್ಕದ್ದು:

(ಎ) ಅದರ ಕಾರ್ಯವಿಧಾನಗಳನ್ನು ನಿಯಂತ್ರಿಸುವುದು ಮತ್ತು ಅದರ ವ್ಯವಹಾರಗಳ ವಿಲೆ ಮಾಡುವುದು; ಮತ್ತು

(ಬಿ) ಅವಶ್ಯವೆಂದು ಭಾವಿಸಬಹುದಾದಂಥ ಇತರ ವಿಷಯಗಳು.

**26. ತೊಂದರೆಗಳನ್ನು ನಿವಾರಿಸುವ ಅಧಿಕಾರ.-** ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆಯು ಉದ್ಭವಿಸಿದರೆ, ರಾಜ್ಯ ಸರ್ಕಾರವು ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗದಂತೆ, ಆದೇಶಗಳ ಮೂಲಕ ತೊಂದರೆಗಳನ್ನು ನಿವಾರಿಸಬಹುದು:

ಪರಂತು ಈ ಅಧಿನಿಯಮವು ಪ್ರಾರಂಭದ ದಿನಾಂಕದಿಂದ ಎರಡು ವರ್ಷಗಳ ಅವಧಿಯು ಮುಕ್ತಾಯವಾದ ತರುವಾಯ, ಅಂಥ ಆದೇಶವನ್ನು ಹೊರಡಿಸುವಂತಿಲ್ಲ.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಮಹತ್ವದ ಆರ್ಥಿಕ ಬೆಳವಣಿಗೆಯ ಸಾಧನಗಳಾದ ಮಾಹಿತಿ ತಂತ್ರಜ್ಞಾನ/ಮಾಹಿತಿ ತಂತ್ರಜ್ಞಾನ ಪೂರಕ ಸೇವೆಗಳು/ಎಲೆಕ್ಟ್ರಾನಿಕ್ ಹಾರ್ಡ್‌ವೇರ್ (ವಿದ್ಯುನ್ಮಾನ ಯಂತ್ರಾಂಶ) ಉತ್ಪಾದನಾ ಘಟಕಗಳಲ್ಲಿ, ಹೂಡಿಕೆಯನ್ನು ಪ್ರೋತ್ಸಾಹಿಸಲು ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳನ್ನು (ಐಟಿಐಆರ್‌ಎಸ್) ಸ್ಥಾಪಿಸುವುದಕ್ಕಾಗಿ 28ನೇ ಮೇ 2008ರಂದು ಒಂದು ಕಾರ್ಯನೀತಿ ನಿರ್ಣಯವನ್ನು ಭಾರತ ಸರ್ಕಾರವು ಪ್ರಕಟಿಸಿತು.

ರಾಜ್ಯ ಸರ್ಕಾರವು, ಅವಶ್ಯವಿರುವೆಡೆಗಳಲ್ಲೆಲ್ಲ ಐಟಿಐಆರ್ ಯೋಜನೆಯನ್ನು ಶಾಸನದ ಮೂಲಕ ಅನುಷ್ಠಾನಗೊಳಿಸುವುದನ್ನು ಕಾರ್ಯನೀತಿ ನಿರ್ಣಯವು ಸ್ಪಷ್ಟಪಡಿಸುತ್ತದೆ.

ಈ ಮುಂದಿನವುಗಳಿಗೆ ಉಪಬಂಧ ಕಲ್ಪಿಸುವುದಕ್ಕಾಗಿ ಒಂದು ಶಾಸನವನ್ನು ಅಧಿನಿಯಮಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ, ಎಂದರೆ:–

(1) ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳನ್ನು ಘೋಷಿಸುವುದು;

(2) ರಾಜ್ಯ ಸರ್ಕಾರವು ಒದಗಿಸಬೇಕಾದ ಮೂಲ ಸೌಕರ್ಯಗಳು;

(3) ಐಟಿಐಆರ್‌ಗಳ ಅಭಿವೃದ್ಧಿಗಾಗಿ ಹೆಚ್ಚುವರಿ ಉತ್ತೇಜಕಗಳ ಪ್ಯಾಕೇಜು;

(4) ಐಟಿಐಆರ್‌ಗಳಿಗಾಗಿ ಭೂಮಿಗಳನ್ನು ಸ್ವಾಧೀನಪಡಿಸಿಕೊಳ್ಳುವುದು;

(5) ಆಡಳಿತ ಮಂಡಳಿಯಿಂದ ಭೂಮಿಯನ್ನು ಹಂಚಿಕೆ ಮಾಡುವುದು;

(6) ಆಡಳಿತ ಮಂಡಳಿಯ ರಚನೆ ಮತ್ತು ಅದರ ಪ್ರಕಾರ್ಯಗಳು;

(7) ಮುಖ್ಯ ಕಾರ್ಯನಿರ್ವಾಹಣಾಧಿಕಾರಿಯ ನೇಮಕ ಮತ್ತು ಆತನ ಪ್ರಕಾರ್ಯಗಳು, ಅಧಿಕಾರಗಳು ಹಾಗೂ ಕರ್ತವ್ಯಗಳು;

(8) ಮಂಡಳಿಯ ಅಧಿಕಾರಿಗಳು ಮತ್ತು ಸಿಬ್ಬಂದಿ;

(9) ರಾಜ್ಯ ಮಟ್ಟದ ಅಧಿಕಾರ ಸಮಿತಿಯ ರಚನೆ ಮತ್ತು ಅದರ ಪ್ರಕಾರ್ಯಗಳು;

(10) ಮಂಡಳಿಯ ನಿಧಿ ಮತ್ತು ಅದರ ವಿನಿಯೋಗ, ಲೆಕ್ಕಪತ್ರ ಮತ್ತು ಲೆಕ್ಕಪರಿಶೋಧನೆ ಹಾಗೂ ವಾರ್ಷಿಕ ವರದಿ;

(11) ದಂಡಗಳು ಇತ್ಯಾದಿ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮದಿಂದಾಗಿ ವಾರ್ಷಿಕ 3.00 ಕೋಟಿ ರೂಪಾಯಿಗಳ ವೆಚ್ಚವುಂಟಾಗುತ್ತದೆ.

## ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಕುರಿತು ಜ್ಞಾಪನ ಪತ್ರ

**ಖಂಡ 2:** (2)ನೇ ಉಪಖಂಡವು, ಭಾರತ ಸರ್ಕಾರದ ಅನುಮೋದನೆಯನ್ನು ಪಡೆದುಕೊಂಡ ತರುವಾಯ, ಮಾಹಿತಿ ತಂತ್ರಜ್ಞಾನ ಪೂರಕಸೇವೆಗಳಲ್ಲಿ ಹೂಡಿಕೆಗಳನ್ನು ಪ್ರೋತ್ಸಾಹಿಸಲು ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳನ್ನು ಅಧಿಸೂಚನೆಯ ಮೂಲಕ ಘೋಷಿಸುವುದಕ್ಕೆ, ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

**ಖಂಡ 5:** ವಿಧೇಯಕದ 5ನೇ ಖಂಡವು, ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಗಳ ಅಭಿವೃದ್ಧಿಗಾಗಿ ಹೆಚ್ಚುವರಿ ಪ್ಯಾಕೇಜುಗಳು ಅಥವಾ ಪ್ರೋತ್ಸಾಹಕಗಳನ್ನು ಅಧಿಸೂಚಿಸುವುದಕ್ಕೆ, ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

**ಖಂಡ 8:** (1)ನೇ ಉಪಖಂಡವು, ಪ್ರತಿಯೊಂದು ಮಾಹಿತಿ ತಂತ್ರಜ್ಞಾನ ಹೂಡಿಕೆ ಪ್ರದೇಶಕ್ಕಾಗಿ ವ್ಯವಸ್ಥಾಪನಾ ಮಂಡಳಿಯ ರಚನೆಯ ವಿಧಾನವನ್ನು ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

(4)ನೇ ಉಪಖಂಡವು, ವ್ಯವಸ್ಥಾಪನಾ ಮಂಡಳಿಯ ಪ್ರಕಾರ್ಯಗಳಿಗೆ ಸಂಬಂಧಿಸಿದ ನಿಯಮಗಳನ್ನು ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

**ಖಂಡ 12** (1)ನೇ ಉಪಖಂಡವು, ರಾಜ್ಯ ಮಟ್ಟದ ಅಧಿಕಾರವುಳ್ಳ ಸಮಿತಿಯ ಸ್ಥಾಪನೆಯ ವಿಧಾನವನ್ನು ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

(2)ನೇ ಉಪಖಂಡವು, ರಾಜ್ಯ ಮಟ್ಟದ ಅಧಿಕಾರವುಳ್ಳ ಸಮಿತಿಯ ಪ್ರಕಾರ್ಯಗಳ ವಿಧಾನವನ್ನು ನಿಯಮಗಳ ಮೂಲಕ ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

**ಖಂಡ 15:** 15ನೇ ಖಂಡವು ಲೆಕ್ಕ ಪುಸ್ತಕಗಳ ನಿರ್ವಹಣೆ ಮತ್ತು ಲೆಕ್ಕ ಪರಿಶೋಧನೆಗಾಗಿ ನಿಯಮಗಳನ್ನು ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಕಟ್ಟಾ ಸುಬ್ರಹ್ಮಣ್ಯ ನಾಯ್ಡು**
ವಸತಿ, ವಾರ್ತಾ, ಮಾಹಿತಿ ಮತ್ತು ಜೈವಿಕ ತಂತ್ರಜ್ಞಾನ
ಹಾಗೂ ಬೆಂಗಳೂರು ಜಲಮಂಡಳಿ ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

**KARNATAKA LEGISLATIVE ASSEMBLY**

**THIRTEENTH LEGISLATIVE ASSEMBLY**

**SIXTH SESSION**

# THE KARNATAKA INFORMATION TECHNOLOGY INVESTMENT REGIONS BILL, 2010

**(L.A. Bill No. 17 of 2010)**

A Bill to provide for the establishment of information technology investment regions in the State of Karnataka to promote investment and to augment exports and generate employment.

Whereas it is expedient to promote investment, boost exports and generate employment in the information Technology (IT), information Technology enabled services (ITES), Electronic Hardware manufacturing (EHM) units in the State of Karnataka;

Be it enacted by the Karnataka State Legislature in the sixty first year of the Republic of India as follows:-

## CHAPTER - I

## PRELIMINARY

**1. Short title and commencement.-** (1) This Act may be called the Karnataka Information Technology Investment Regions Act, 2010.

(2) It shall come into force on such date as the State Government, may by notification, appoint.

**2. Definitions.**- In this Act, unless the context otherwise requires:-

(1) **"Authority"** means the Karnataka Industrial Area Development Board constituted under the Karnataka Industrial Area Development Act, 1966( Karnataka Act, 18 of 1966), the Karnataka Housing Board constituted under the Karnataka Housing Board Act, 1962, (Karnataka Act, 10 of 1993) and such other Authority or Board, by whatever name called, empowered to acquire land;

(2) **"Board"** means the Management Board Constituted under section 8;

(3) **"Chief Executive Officer"** means the Chief Executive Officer of the Board;

(4) **"Developer or Co-developer"** means a Developer or Co-developer who has been selected as such by the State Government through a transparent mechanism;

(5) **"Feasibility report**" means the Feasibility report prepared under sub-section (1) of section 3;

(6) **"High Powered Committee"** means the High Powered Committee constituted by the Government of India vide Policy Resolution dated 28th May 2008 of the Ministry of Communication and Information Technology, New Delhi;

(7) **"Information Technology Investment Regions (ITIRs)"** means the Information Technology Investment Regions declared under section 3;

(8) **"Nodal Department"** means the Department of Information Technology, Biotechnology and Science & Technology of the State Government;

Be it enacted by the Karnataka state Legislature in the Sixty first year of the Republic of India as follows:-

**1. Short title and commencement.-** (1) This Act may be called the Karnataka Irrigation and Certain Other law (Amendment) Act, 2010.

(2) It shall come into force at once.

**2. Amendment of Karnataka Act 16 of 1965.-** In the Karnataka Irrigation Act, 1965 (Karnataka Act 16 of 1965) (hereinafter referred to as the principal Act),-

(i) in section 62(A), in clause(2), after the words "or Karnataka Neeravari Nigam" the words "or Cauvery Neeravari Nigam Limited or any other body or Corporation established by the State Government for this purpose" shall be inserted;

(ii) in section 62AA, in clause (2), after the words `"or Karnataka Neeravari Nigam Limited", the words "or Cauvery Neeravari Nigam Limited or any other body or Corporation established by the State Government for this purpose" shall be inserted.

**3. Amendment of Karnataka Act 28 of 1957.-** In the Karnataka Irrigation (Levy of Betterment Contribution and Water Rate) Act, 1957 (Karnataka Act 28 of 1957), in section 10, in sub-section (1), in the proviso, after the words "or Karnataka Neeravari Nigam Limited" the words "or Cauvery Neeravari Nigam Limited or any other body or Corporation established by the State Government for this purpose" shall be inserted.

**STATEMENT OF OBJECTS AND REASONS**

1. It is considered necessary to amend the Karnataka Irrigation Act, 1965 to provide for supply of water in bulk on volumetric basis by the Cauvery Neeravari Nigam Limited to the Water Users Co-operative Societies.
2. It is considered necessary to amend the Karnataka Irrigation (Levy of Betterment Contribution and Water Rates) Act, 1957, to enable the Cauvery Neeravari Nigam Ltd., to levy and collect water rates for the water supplied or made available from an irrigation network in any area or areas by the Nigam.

Hence the Bill.

**FINANCIAL MEMORANDUM**

There is no extra expenditure involved in the proposed measures.

**BASAVARAJ BOMMAI**
Minister for Water Resources

**S.B. PATIL**
Secretary
Karnataka Legislative Assembly

**ANNEXURE**

**Extract from the Karnataka Irrigation Act, 1965**
**(Karnataka Act 16 of 1965)**

xx xx xx

**62A. Functions of Water Users Society.-**Water Users Society shall perform the following functions, namely:-

xx xx xx;

(2) to procure water in bulk on volumetric basis from the Irrigation Department or Krishna Jala Bhagya Nigama or Karnataka Neeravari Nigam and distribute it to the land holders in accordance with the principles laid down by the General Body for equitable distribution of water;

**62AA. Functions of Water Users Association:-**Water Users Association shall perform the following functions, namely:-

xx xx xx;

(2) To procure water in bulk on volumetric basis from the Irrigation Department or Krishna Jala Bhagya Nigam or Karnataka Neeravari Nigam and distribute it to the land holders in accordance with the principles laid down at the General meeting for equitable distribution of water;

xx xx xx

**Extract from the Karnataka Irrigation (Levy of Betterment Contribution and Water Rate) Act, 1957 (Karnataka Act 28 of 1957)**

xx xx xx

**10. Levy of water rate.-** (1) Whenever,—

XX XX XX

(b) water is supplied, made available or used for purposes of irrigation or any other purpose from any work belonging to, or constructed by, or on behalf of the Government; and

water from any such work, by direct flow or percolation or by indirect flow, percolation or drainage from or through adjoining land irrigates any land under cultivation or flows into a reservoir and thereafter, by direct flow or percolation or by indirect flow, percolation or drainage from or through adjoining land irrigates any land under cultivation and, in the opinion of the Deputy Commissioner such irrigation is beneficial to and sufficient for the requirements of crop on such land,

(d) water supplied or made available to the Government by the authority established under section 66 of the Andhra State Act, 1953, is supplied, made available or used for purposes of irrigation or any other purpose. the Government shall be entitled to levy a separate charge for such water hereinafter referred to as water rate and the Government may prescribe the rates at which such water rates shall be levied, which may be,—

(i) different in respect of water supplied made available or used for different purposes;

(ii) different in respect of water supplied, made available or used from different irrigation works, and when water is supplied, made available or used for irrigation of any land, with or without reference to the crop or crops grown or which may be grown on such land;

(iii) in lieu of water rate, if any, payable under any other law ;

and the manner in which and the authority by which the amount of water rate levied shall be determined.

Provided that if in any area or areas water is supplied or made available from any irrigation work by or on behalf of the Krishna Bhagya Jala Nigam Limited or Karnataka Neeravari Nigam Limited (hereinafter called as Nigam) the water rates shall be levied and collected by the said Nigam in such area or areas

xx xx xx

## ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಜುಲೈ ೧೫, ೨೦೧೦ (ಆಷಾಢ ೨೪, ಶಕ ವರ್ಷ ೧೯೩೨) | ನಂ. ೮೨೨ |
|---|---|---|

**ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕವಿಪ:ಶಾರಶಾ:ವಿಪವಿ:03:2010, ದಿ. 15ನೇ ಜುಲೈ, 2010**

ಈ ಮುಂದಿನ ವಿಧೇಯಕವನ್ನು ವಿಧಾನ ಪರಿಷತ್ತಿನಲ್ಲಿ ದಿನಾಂಕ: 15ನೇ ಜುಲೈ 2010 ರಂದು ಮಂಡಿಸಲಾಯಿತು.

**ಕರ್ನಾಟಕ ವಿಧಾನ ಪರಿಷತ್ತು**

**ನೂರ ಹದಿಮೂರನೆಯ ಅಧಿವೇಶನ**

**ಕರ್ನಾಟಕ ಪಂಚಾಯತ್ ರಾಜ್ (ತಿದ್ದುಪಡಿ) ವಿಧೇಯಕ, 2010**

**(2010ರ ವಿಧಾನ ಪರಿಷತ್ತಿನ ವಿಧೇಯಕ ಸಂಖ್ಯೆ 03)**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನುಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ನ್ನು (1993ರ ಕರ್ನಾಟಕ ಅಧಿನಿಯಮ 14) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ ;

ಇದು, ಭಾರತ ಗಣರಾಜ್ಯದ ಅರವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ :–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು **ಕರ್ನಾಟಕ ಪಂಚಾಯತ್ ರಾಜ್ (ತಿದ್ದುಪಡಿ) ಅಧಿನಿಯಮ, 2010** ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 2ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ (1993ರ ಕರ್ನಾಟಕ ಅಧಿನಿಯಮ 14) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 2ನೇ ಪ್ರಕರಣದಲ್ಲಿ, (28)ನೇ ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ :–

"(28–ಎ) "ಪಂಚಾಯತಿ ಅಭಿವೃದ್ಧಿ ಅಧಿಕಾರಿ" ಎಂದರೆ, ಗ್ರಾಮ ಪಂಚಾಯತಿಯ ಪಂಚಾಯತಿ ಅಭಿವೃದ್ಧಿ ಅಧಿಕಾರಿ;"

**3. 5ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 5ನೇ ಪ್ರಕರಣದ (4)ನೇ ಉಪ ಪ್ರಕರಣದಲ್ಲಿ, "ಮೂರನೇ ಒಂದರಷ್ಟಕ್ಕೆ" ಎಂಬ ಪದಗಳಿಗೆ "ಶೇಕಡಾ ಐವತ್ತರಷ್ಟಕ್ಕೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**4. 7ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 7ನೇ ಪ್ರಕರಣದಲ್ಲಿ, (2)ನೇ ಉಪ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ :–

"(3) ಈ ಅಧಿನಿಯಮದಲ್ಲಿ ಅಥವಾ ಅದರಡಿಯಲ್ಲಿ ರಚಿಸಲಾದ ನಿಯಮಗಳಲ್ಲಿ ಏನೇ ಇದ್ದರೂ, ನಿಯಮಿಸಬಹುದಾದಂಥ ವಿಧಾನದಲ್ಲಿ, ಮತದಾನ ಯಂತ್ರಗಳ ಮೂಲಕ, ಗ್ರಾಮ ಪಂಚಾಯತಿ ಚುನಾವಣೆಯಲ್ಲಿ ಮತಗಳನ್ನು ನೀಡುವುದನ್ನು ಮತ್ತು ದಾಖಲಿಸುವುದನ್ನು, ಪ್ರತಿಯೊಂದು ಪ್ರಕರಣದ ಪರಿಸ್ಥಿತಿಗನುಸಾರವಾಗಿ ರಾಜ್ಯ ಚುನಾವಣಾ ಆಯೋಗವು ನಿರ್ದಿಷ್ಟ ಪಡಿಸಬಹುದಾದಂತೆ ಅಂಥ ಚುನಾವಣಾ ಕ್ಷೇತ್ರದಲ್ಲಿ ಅಥವಾ ಚುನಾವಣಾ ಕ್ಷೇತ್ರಗಳಲ್ಲಿ ಅಂಗೀಕರಿಸಬಹುದು.

**ವಿವರಣೆ:** ಈ ಪ್ರಕರಣದ ಉದ್ದೇಶಕ್ಕಾಗಿ, "ಮತದಾನ ಯಂತ್ರ" ಎಂದರೆ, ಮತಗಳನ್ನು ನೀಡುವುದಕ್ಕೆ ಅಥವಾ ದಾಖಲಿಸುವುದಕ್ಕೆ ಬಳಸಲಾಗುವ, ವಿದ್ಯುನ್ಮಾನ ವಿಧಾನದ ಮೂಲಕವಾಗಲಿ ಅಥವಾ ಅನ್ಯಥಾ ಕಾರ್ಯ ನಿರ್ವಹಿಸುವ, ಯಾವುದೇ ಯಂತ್ರ ಅಥವಾ ಸಲಕರಣೆ ಮತ್ತು ಈ ಅಧಿನಿಯಮದಲ್ಲಿ ಅಥವಾ ಅದರಡಿಯಲ್ಲಿ ರಚಿಸಲಾದ ನಿಯಮಗಳಲ್ಲಿ ಮತಪೆಟ್ಟಿಗೆ ಅಥವಾ ಮತಪತ್ರಕ್ಕೆ ಸಂಬಂಧಿಸಿದ ಯಾವುದೇ ಉಲ್ಲೇಖವು, ಅನ್ಯಥಾ ಉಪಬಂಧಿಸಿದುದನ್ನುಳಿದು, ಯಾವುದೇ ಚುನಾವಣೆಯಲ್ಲಿ ಅಂಥ ಮತಯಂತ್ರಗಳನ್ನು ಬಳಸಿರುವಲ್ಲೆಲ್ಲಾ ಅಂಥ ಮತಯಂತ್ರಕ್ಕೆ ಸಂಬಂಧಿಸಿದ ಉಲ್ಲೇಖವನ್ನು ಒಳಗೊಳ್ಳುತ್ತದೆಂಬುದಾಗಿ ಅರ್ಥೈಸಲಾಗುವುದು."

**5. 44ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 44ನೇ ಪ್ರಕರಣದ (2)ನೇ ಉಪ ಪ್ರಕರಣದ (ಸಿ) ಖಂಡದಲ್ಲಿ, "ಮೂರನೇ ಒಂದರಷ್ಟಕ್ಕೆ" ಎಂಬ ಪದಗಳಿಗೆ "ಶೇಕಡಾ ಐವತ್ತರಷ್ಟಕ್ಕೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**6. 111ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 111ನೇ ಪ್ರಕರಣದ (1)ನೇ ಉಪ ಪ್ರಕರಣದಲ್ಲಿ "ಕಾರ್ಯದರ್ಶಿಯನ್ನು" ಎಂಬ ಪದಕ್ಕೆ "ಪಂಚಾಯತಿ ಅಭಿವೃದ್ಧಿ ಅಧಿಕಾರಿ ಮತ್ತು ಕಾರ್ಯದರ್ಶಿಯನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**7. 112ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 112ನೇ ಪ್ರಕರಣದ (2)ನೇ ಉಪ ಪ್ರಕರಣದಲ್ಲಿ "ಕಾರ್ಯದರ್ಶಿಯನ್ನು" ಎಂಬ ಪದಕ್ಕೆ "ಪಂಚಾಯತಿ ಅಭಿವೃದ್ಧಿ ಅಧಿಕಾರಿ, ಕಾರ್ಯದರ್ಶಿ ಮತ್ತು ಲೆಕ್ಕ ಸಹಾಯಕನನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**8. 113ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 113ನೇ ಪ್ರಕರಣದ (2) ಮತ್ತು (4)ನೇ ಉಪ ಪ್ರಕರಣಗಳಲ್ಲಿ "ಕಾರ್ಯದರ್ಶಿಯು" ಎಂಬ ಪದಕ್ಕೆ "ಪಂಚಾಯತಿ ಅಭಿವೃದ್ಧಿ ಅಧಿಕಾರಿಯು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**9. 123ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 123ನೇ ಪ್ರಕರಣದ (3)ನೇ ಉಪ ಪ್ರಕರಣದಲ್ಲಿ "ಮೂರನೇ ಒಂದರಷ್ಟಕ್ಕೆ" ಎಂಬ ಪದಗಳಿಗೆ "ಶೇಕಡಾ ಐವತ್ತರಷ್ಟಕ್ಕೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**10. 130ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 130ನೇ ಪ್ರಕರಣದ (2)ನೇ ಉಪ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(2ಎ) ಈ ಅಧಿನಿಯಮದಲ್ಲಿ ಅಥವಾ ಅದರಡಿಯಲ್ಲಿ ರಚಿಸಲಾದ ನಿಯಮಗಳಲ್ಲಿ ಏನೇ ಇದ್ದರೂ, ನಿಯಮಿಸಬಹುದಾದಂಥ ವಿಧಾನದಲ್ಲಿ, ಮತದಾನ ಯಂತ್ರಗಳ ಮೂಲಕ, ತಾಲ್ಲೂಕು ಪಂಚಾಯತಿ ಚುನಾವಣೆಯಲ್ಲಿ ಮತಗಳನ್ನು ನೀಡುವುದನ್ನು ಮತ್ತು ದಾಖಲಿಸುವುದನ್ನು, ಪ್ರತಿಯೊಂದು ಪ್ರಕರಣದ ಪರಿಸ್ಥಿತಿಗನುಸಾರವಾಗಿ ರಾಜ್ಯ ಚುನಾವಣಾ ಆಯೋಗವು ನಿರ್ದಿಷ್ಟ ಪಡಿಸಬಹುದಾದಂತೆ ಅಂಥ ಚುನಾವಣಾ ಕ್ಷೇತ್ರದಲ್ಲಿ ಅಥವಾ ಚುನಾವಣಾ ಕ್ಷೇತ್ರಗಳಲ್ಲಿ ಅಂಗೀಕರಿಸಬಹುದು.

**ವಿವರಣೆ:** ಈ ಪ್ರಕರಣದ ಉದ್ದೇಶಕ್ಕಾಗಿ, "ಮತದಾನ ಯಂತ್ರ" ಎಂದರೆ, ಮತಗಳನ್ನು ನೀಡುವುದಕ್ಕೆ ಅಥವಾ ದಾಖಲಿಸುವುದಕ್ಕೆ ಬಳಸಲಾಗುವ, ವಿದ್ಯುನ್ಮಾನ ವಿಧಾನದ ಮೂಲಕವಾಗಲಿ ಅಥವಾ ಅನ್ಯಥಾ, ಕಾರ್ಯ ನಿರ್ವಹಿಸುವ, ಯಾವುದೇ ಯಂತ್ರ ಅಥವಾ ಸಲಕರಣೆ ಮತ್ತು ಈ ಅಧಿನಿಯಮ ಅಥವಾ ಅದರಡಿಯಲ್ಲಿ ರಚಿಸಲಾದ ನಿಯಮಗಳಲ್ಲಿ ಮತಪೆಟ್ಟಿಗೆ ಅಥವಾ ಮತಪತ್ರಕ್ಕೆ ಸಂಬಂಧಿಸಿದ ಯಾವುದೇ ಉಲ್ಲೇಖವು, ಅನ್ಯಥಾ ಉಪಬಂಧಿಸಿದುದನ್ನುಳಿದು, ಯಾವುದೇ ಚುನಾವಣೆಯಲ್ಲಿ ಅಂಥ ಮತಯಂತ್ರಗಳನ್ನು ಬಳಸಿರುವಲ್ಲೆಲ್ಲಾ ಅಂಥ ಮತಯಂತ್ರಕ್ಕೆ ಸಂಬಂಧಿಸಿದ ಉಲ್ಲೇಖವನ್ನು ಒಳಗೊಳ್ಳುತ್ತದೆಂಬುದಾಗಿ ಅರ್ಥೈಸಲಾಗುವುದು."

**11. 138ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 138ನೇ ಪ್ರಕರಣದ (2)ನೇ ಉಪ ಪ್ರಕರಣದ (ಸಿ) ಖಂಡದಲ್ಲಿ "ಮೂರನೇ ಒಂದರಷ್ಟಕ್ಕೆ" ಎಂಬ ಪದಗಳಿಗೆ "ಶೇಕಡಾ ಐವತ್ತರಷ್ಟಕ್ಕೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**12. 162ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 162ನೇ ಪ್ರಕರಣದ (3)ನೇ ಉಪ ಪ್ರಕರಣದಲ್ಲಿ "ಮೂರನೇ ಒಂದು ಭಾಗಕ್ಕಿಂತ" ಎಂಬ ಪದಗಳಿಗೆ "ಶೇಕಡಾ ಐವತ್ತಕ್ಕಿಂತ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**13. 169ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 169ನೇ ಪ್ರಕರಣದ (2)ನೇ ಉಪ ಪ್ರಕರಣದಲ್ಲಿ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(2ಎ) ಈ ಅಧಿನಿಯಮದಲ್ಲಿ ಅಥವಾ ಅದರಡಿಯಲ್ಲಿ ರಚಿಸಲಾದ ನಿಯಮಗಳಲ್ಲಿ ಏನೇ ಇದ್ದರೂ, ನಿಯಮಿಸಬಹುದಾದಂಥ ವಿಧಾನದಲ್ಲಿ, ಮತದಾನ ಯಂತ್ರಗಳ ಮೂಲಕ, ಜಿಲ್ಲಾ ಪಂಚಾಯತ್ ಚುನಾವಣೆಯಲ್ಲಿ ಮತಗಳನ್ನು ನೀಡುವುದನ್ನು ಮತ್ತು ದಾಖಲಿಸುವುದನ್ನು, ಪ್ರತಿಯೊಂದು ಪ್ರಕರಣದ ಪರಿಸ್ಥಿತಿಗನುಸಾರವಾಗಿ ರಾಜ್ಯ ಚುನಾವಣಾ ಆಯೋಗವು ನಿರ್ದಿಷ್ಟ ಪಡಿಸಬಹುದಾದಂತೆ ಅಂಥ ಚುನಾವಣಾ ಕ್ಷೇತ್ರದಲ್ಲಿ ಅಥವಾ ಚುನಾವಣಾ ಕ್ಷೇತ್ರಗಳಲ್ಲಿ ಅಂಗೀಕರಿಸಬಹುದು.

**ವಿವರಣೆ:** ಈ ಪ್ರಕರಣದ ಉದ್ದೇಶಕ್ಕಾಗಿ, "ಮತದಾನ ಯಂತ್ರ" ಎಂದರೆ, ಮತಗಳನ್ನು ನೀಡುವುದಕ್ಕೆ ಅಥವಾ ದಾಖಲಿಸುವುದಕ್ಕೆ ಬಳಸಲಾಗುವ, ವಿದ್ಯುನ್ಮಾನ ವಿಧಾನದ ಮೂಲಕವಾಗಲಿ ಅಥವಾ ಅನ್ಯಥಾ, ಕಾರ್ಯ ನಿರ್ವಹಿಸುವ, ಯಾವುದೇ ಯಂತ್ರ ಅಥವಾ ಸಲಕರಣೆ ಮತ್ತು ಈ ಅಧಿನಿಯಮದಲ್ಲಿ ಅಥವಾ ಅದರಡಿಯಲ್ಲಿ ರಚಿಸಲಾದ ನಿಯಮಗಳಲ್ಲಿ ಮತಪೆಟ್ಟಿಗೆ ಅಥವಾ ಮತಪತ್ರಕ್ಕೆ ಸಂಬಂಧಿಸಿದ ಯಾವುದೇ ಉಲ್ಲೇಖವು, ಅನ್ಯಥಾ ಉಪಬಂಧಿಸಿದುದನ್ನುಳಿದು, ಯಾವುದೇ ಚುನಾವಣೆಯಲ್ಲಿ ಅಂಥ ಮತಯಂತ್ರಗಳನ್ನು ಬಳಸಿರುವಲ್ಲೆಲ್ಲಾ ಅಂಥ ಮತಯಂತ್ರಕ್ಕೆ ಸಂಬಂಧಿಸಿದ ಉಲ್ಲೇಖವನ್ನು ಒಳಗೊಳ್ಳುತ್ತದೆಂಬುದಾಗಿ ಅರ್ಥೈಸಲಾಗುವುದು."

**14. 177ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 177ನೇ ಪ್ರಕರಣದ (2)ನೇ ಉಪ ಪ್ರಕರಣದ (ಸಿ) ಖಂಡದಲ್ಲಿ, "ಮೂರನೇ ಒಂದರಷ್ಟಕ್ಕೆ" ಎಂಬ ಪದಗಳಿಗೆ "ಶೇಕಡಾ ಐವತ್ತರಷ್ಟಕ್ಕೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**15. 200ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 200ನೇ ಪ್ರಕರಣದ (3)ನೇ ಉಪ ಪ್ರಕರಣದಲ್ಲಿ "ಕಾರ್ಯದರ್ಶಿ" ಎಂಬ ಪದಕ್ಕೆ "ಪಂಚಾಯತಿ ಅಭಿವೃದ್ಧಿ ಅಧಿಕಾರಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**16. 241ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 241ನೇ ಪ್ರಕರಣದ (1) ಮತ್ತು (5)ನೇ ಉಪ ಪ್ರಕರಣಗಳಲ್ಲಿ "ಕಾರ್ಯದರ್ಶಿಯು" ಎಂಬ ಪದಕ್ಕೆ "ಪಂಚಾಯತಿ ಅಭಿವೃದ್ಧಿ ಅಧಿಕಾರಿಯು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

### ಉದ್ದೇಶ ಮತ್ತು ಕಾರಣಗಳ ಹೇಳಿಕೆ

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ನ್ನು,

(1) "ಪಂಚಾಯತಿ ಅಭಿವೃದ್ಧಿ ಅಧಿಕಾರಿ" ಎಂಬುದನ್ನು ಪರಿಭಾಷಿಸಲು ಮತ್ತು ಆತನ ಅಧಿಕಾರಗಳು ಮತ್ತು ಕರ್ತವ್ಯಗಳಿಗೆ ಉಪಬಂಧ ಕಲ್ಪಿಸುವುದಕ್ಕಾಗಿ;

(2) ಚುನಾವಣಾ ಫಲಿತಾಂಶಗಳನ್ನು ಶೀಘ್ರವಾಗಿ ಮತ್ತು ಖಚಿತವಾಗಿ ಅಧಿಸೂಚಿಸಲು ಮತ್ತು ರಾಜ್ಯದಲ್ಲಿ ಗ್ರಾಮ ಪಂಚಾಯತಿ, ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿ ಚುನಾವಣೆಗಳಲ್ಲಿ ವಿದ್ಯುನ್ಮಾನ ಮತ ಯಂತ್ರಗಳನ್ನು ಬಳಸುವ ಮೂಲಕ ಪಂಚಾಯತ್ ರಾಜ್ ಸಂಸ್ಥೆಗಳ ಚುನಾವಣಾ ಪದ್ಧತಿಯಲ್ಲಿ ಆಧುನಿಕ ತಂತ್ರಜ್ಞಾನವನ್ನು ಪರಿಚಯಿಸುವುದಕ್ಕಾಗಿ;

(3) ಪಂಚಾಯತ್ ರಾಜ್ಯ ಸಂಸ್ಥೆಗಳಲ್ಲಿನ ಎಲ್ಲಾ ಮೂರು ಹಂತಗಳಲ್ಲಿ, ಸ್ಥಾನಗಳಲ್ಲಿ ಅಥವಾ ಹುದ್ದೆಗಳಲ್ಲಿ ಮಹಿಳೆಯರಿಗೆ ಶೇಕಡಾ ಐವತ್ತರಷ್ಟು ಮೀಸಲಾತಿಗಾಗಿ ಉಪಬಂಧ ಕಲ್ಪಿಸುವುದಕ್ಕಾಗಿ,–

–ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಜಗದೀಶ್ ಶೆಟ್ಟರ್**
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

**ವಿ. ಶ್ರೀಶ್**
ಸರ್ಕಾರದ ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

**ಅನುಬಂಧ**

**ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ (1993ರ ಕರ್ನಾಟಕ ಅಧಿನಿಯಮ 14) ಉದ್ಧೃತ ಭಾಗ**

**xx xx xx**

**2. ಅರ್ಥ ವಿವರಣೆಗಳು.–** ಈ ಅಧಿನಿಯಮದಲ್ಲಿ, ಸಂದರ್ಭಕ್ಕೆ ಬೇರೆ ಅರ್ಥದ ಅಗತ್ಯ ಇರದಿದ್ದರೆ,–

**xx xx xx**

(28) "ಪಂಚಾಯತಿ ಪ್ರದೇಶ" ಎಂದರೆ 4ನೇ ಪ್ರಕರಣದಡಿ ಪಂಚಾಯತಿ ಪ್ರದೇಶ ಎಂದು ಘೋಷಿಸಿರುವ ಯಾವುದೇ ಪ್ರದೇಶ;

**xx xx xx**

**5. ಗ್ರಾಮ ಪಂಚಾಯತಿಯ ರಚನೆ.–** (1) ಪಂಚಾಯತಿ ಪ್ರದೇಶದ ಜನಸಂಖ್ಯೆಯ ಪ್ರತಿ ನಾಲ್ಕು ನೂರು ಅಥವಾ ಅದರ ಭಾಗಕ್ಕೆ ಒಬ್ಬ ಸದಸ್ಯನಂತೆ, ರಾಜ್ಯ ಚುನಾವಣಾ ಆಯೋಗವು ಕಾಲಕಾಲಕ್ಕೆ ಅಧಿಸೂಚಿಸಬಹುದಾದಂಥ ಸಂಖ್ಯೆಯ ಚುನಾಯಿತ ಸದಸ್ಯರನ್ನು ಗ್ರಾಮ ಪಂಚಾಯತಿಯು ಹೊಂದಿರತಕ್ಕದ್ದು:

**xx xx xx**

(4) ಅನುಸೂಚಿತ ಜಾತಿಗಳ, ಅನುಸೂಚಿತ ಪಂಗಡಗಳ ಮತ್ತು ಹಿಂದುಳಿದ ವರ್ಗಗಳ ವ್ಯಕ್ತಿಗಳ ಪ್ರತಿಯೊಂದು ಪ್ರವರ್ಗಕ್ಕೂ ಮೀಸಲಿಟ್ಟಿರುವ ಸ್ಥಾನಗಳಲ್ಲಿ ಮತ್ತು ಮೀಸಲಿಟ್ಟಿರದ ಸ್ಥಾನಗಳಲ್ಲಿ ಮೂರನೇ ಒಂದರಷ್ಟಕ್ಕೆ ಕಡಿಮೆ ಇಲ್ಲದಷ್ಟು ಸ್ಥಾನವನ್ನು ಮಹಿಳೆಯರಿಗಾಗಿ ರಾಜ್ಯ ಚುನಾವಣಾ ಆಯೋಗದ ಸಾಮಾನ್ಯ ಅಥವಾ ವಿಶೇಷ ಆದೇಶಕ್ಕೆ ಒಳಪಟ್ಟು, ಡೆಪ್ಯುಟಿ ಕಮೀಷನರು ಮೀಸಲಿರಿಸತಕ್ಕದ್ದು:

**xx xx xx**

**7. ಮತದಾನದ ವಿಧಾನ ಮತ್ತು ಚುನಾವಣಾ ಕಾರ್ಯವಿಧಾನ.–** (1) ಪ್ರತಿಯೊಬ್ಬ ಮತದಾರನು, ಚುನಾವಣಾ ಕ್ಷೇತ್ರದಿಂದ ಎಷ್ಟು ಸದಸ್ಯರು ಚುನಾಯಿತರಾಗಬೇಕಾಗಿದೆಯೋ ಅಷ್ಟು ಮತಗಳನ್ನು ಹೊಂದಿರತಕ್ಕದ್ದು. ಯಾವನೇ ಮತದಾರನು, ಒಬ್ಬ ಅಭ್ಯರ್ಥಿಗೆ ಒಂದಕ್ಕಿಂತ ಹೆಚ್ಚು ಮತವನ್ನು ಕೊಡತಕ್ಕದ್ದಲ್ಲ.

(2) ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ಗ್ರಾಮ ಪಂಚಾಯತಿಗೆ ಚುನಾವಣೆಗಳನ್ನು, ಪಕ್ಷದ ಆಧಾರದ ಮೇಲಲ್ಲದೆ, ಗೊತ್ತುಪಡಿಸಬಹುದಾದಂಥ ನಿಯಮಗಳಿಗೆ ಅನುಸಾರವಾಗಿ ಮತದಾನದ ಮೂಲಕ ನಡೆಸತಕ್ಕದ್ದು.

**xx xx xx**

**44. ಅಧ್ಯಕ್ಷನ ಅಥವಾ ಉಪಾಧ್ಯಕ್ಷನ ಚುನಾವಣೆ.–** (1) **xx xx xx**

(2) ರಾಜ್ಯ ಚುನಾವಾಣಾ ಆಯೋಗದಸಾಮಾನ್ಯ ಅಥವಾ ವಿಶೇಷ ಆದೇಶಕ್ಕೆ ಒಳಪಟ್ಟು, ಡೆಪ್ಯುಟಿ ಕಮೀಷನರ್ ಅವರು,–

(ಎ) **xx xx xx**

(ಸಿ) ರಾಜ್ಯದಲ್ಲಿರುವ ಗ್ರಾಮ ಪಂಚಾಯತಿಗಳ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಹುದ್ದೆಗಳ ಒಟ್ಟು ಸಂಖ್ಯೆಯಲ್ಲಿ ಅನುಸೂಚಿತ ಜಾತಿಗಳ, ಅನುಸೂಚಿತ ಪಂಗಡಗಳ ಮತ್ತು ಹಿಂದುಳಿದ ವರ್ಗಗಳ ಪ್ರತಿಯೊಂದು ಪ್ರವರ್ಗಕ್ಕೂ ಮೀಸಲಿಟ್ಟಿರುವ ಹುದ್ದೆಗಳಲ್ಲಿ ಮತ್ತು ಮೀಸಲಿಟ್ಟಿರದ ಹುದ್ದೆಗಳಲ್ಲಿ ಮೂರನೇ ಒಂದರಷ್ಟಕ್ಕೆ ಕಡಿಮೆ ಇಲ್ಲದಷ್ಟು ಹುದ್ದೆಗಳನ್ನು ಮಹಿಳೆಯರಿಗಾಗಿ ಮೀಸಲಿಡತಕ್ಕದ್ದು:

ಪರಂತು, ಈ ಉಪ ಪ್ರಕರಣದ ಅಡಿಯಲ್ಲಿ ಮೀಸಲಿಟ್ಟ ಹುದ್ದೆಗಳನ್ನು ಸರದಿ ಪ್ರಕಾರ ವಿವಿಧ ಗ್ರಾಮ ಪಂಚಾಯತಿಗಳಿಗೆ ಹಂಚಿಕೆ ಮಾಡತಕ್ಕದ್ದು.

**ವಿವರಣೆ.**– ಸಂದೇಹಗಳ ನಿವಾರಣೆಗಾಗಿ ಈ ಪ್ರಕರಣದ ಅಡಿಯಲ್ಲಿ ಹುದ್ದೆಯ ಮೀಸಲಾತಿಯ ಉದ್ದೇಶಗಳಿಗಾಗಿ ಸರದಿಯ ಸೂತ್ರವು 1993ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮವು ಪ್ರಾರಂಭವಾದ ನಂತರ ನಡೆಸುವ ಪ್ರಥಮ ಚುನಾವಣೆಯಿಂದ ಪ್ರಾರಂಭವಾಗತಕ್ಕದ್ದೆಂದು ಈ ಮೂಲಕ ಘೋಷಿಸಲಾಗಿದೆ.

**xx** **xx** **xx**

**111. ಕಾರ್ಯದರ್ಶಿ.**– (1) ಪ್ರತಿಯೊಂದು ಗ್ರಾಮ ಪಂಚಾಯತಿಯು, ಸರ್ಕಾರದ ಅಧಿಕಾರಿಯಾಗಿರತಕ್ಕ ಒಬ್ಬ ಪೂರ್ಣಕಾಲಿಕ ಕಾರ್ಯದರ್ಶಿಯನ್ನು ಹೊಂದಿರತಕ್ಕದ್ದು ಹಾಗೂ ಅವನ ವೇತನ ಮತ್ತು ಭತ್ಯೆಗಳನ್ನು ಸರ್ಕಾರವು ಗ್ರಾಮ ಪಂಚಾಯಿತಿ ನಿಧಿಗೆ ಜಮಾ ಮಾಡಿದ ನಂತರ ಆ ಗ್ರಾಮ ಪಂಚಾಯತಿ ನಿಧಿಯಿಂದ ಭರಿಸತಕ್ಕದ್ದು.

**xx** **xx** **xx**

**112. ಸಿಬ್ಬಂದಿ ಸ್ವರೂಪ ಮತ್ತು ಉದ್ಯೋಗಿಗಳ ಪಟ್ಟಿ.**– (1) ಸರ್ಕಾರವು, ಆದೇಶದ ಮೂಲಕ, ಗ್ರಾಮ ಪಂಚಾಯತಿಗಳ ಸಿಬ್ಬಂದಿ ಸ್ವರೂಪ, ವೇತನ ಶ್ರೇಣಿಗಳು ಮತ್ತು ನೇಮಕಾತಿ ವಿಧಾನವನ್ನು ನಿರ್ದಿಷ್ಟಪಡಿಸಬಹುದು.

(2) (1)ನೆಯ ಉಪಪ್ರಕರಣಕ್ಕೆ ಒಳಪಟ್ಟು, ಗ್ರಾಮ ಪಂಚಾಯತಿಯು ಕಾರ್ಯದರ್ಶಿಯನ್ನು ಹೊರತುಪಡಿಸಿ, ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ಗ್ರಾಮ ಪಂಚಾಯತಿಗೆ ವಿಧಿಸಿರುವ ಕರ್ತವ್ಯಗಳನ್ನು ನೆರವೇರಿಸಲು ಅಗತ್ಯವಾದ ತನ್ನ ಅಧಿಕಾರಿಗಳ ಪದನಾಮ ಮತ್ತು ದರ್ಜೆಗಳು ಮತ್ತು ಅವರಿಗೆ ಸಂದಾಯವಾಗತಕ್ಕ ವೇತನಗಳು ಮತ್ತು ಭತ್ಯೆಗಳನ್ನು ನಮೂದಿಸಿ, ಉದ್ಯೋಗಿಗಳ ಒಂದು ಪಟ್ಟಿಯನ್ನು ನಿರ್ಧರಿಸತಕ್ಕದ್ದು ಮತ್ತು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರಿಗೆ ಅನುಮೋದನೆಗಾಗಿ ಅದನ್ನು ಸಲ್ಲಿಸತಕ್ಕದ್ದು.

**113. ನೌಕರರ ನೇಮಕಾತಿ ಮತ್ತು ನಿಯಂತ್ರಣ.**– (1) **xx** **xx** **xx**

(2) ಕಾರ್ಯದರ್ಶಿಯು, ಆದೇಶದ ಮೂಲಕ ಗ್ರಾಮ ಪಂಚಾಯತಿಯು ನೇಮಕ ಮಾಡಿಕೊಂಡ ಯಾವನೇ ನೌಕರನಿಗೆ ದಂಡ ವಿಧಿಸಬಹುದು, ಅಥವಾ ಅವನ ವಾರ್ಷಿಕ ಬಡ್ತಿಯನ್ನು ತಡೆಹಿಡಿಯಬಹುದು.

(3) ಗ್ರಾಮ ಪಂಚಾಯತಿಯು, ತಾನು ನೇಮಕ ಮಾಡಿದ ಯಾರೇ ನೌಕರರನ್ನು, ದರ್ಜೆಯಲ್ಲಿ ಇಳಿಸಬಹುದು, ಕೆಲಸದಿಂದ ತೆಗೆದುಹಾಕಬಹುದು ಅಥವಾ ವಜಾ ಮಾಡಬಹುದು.

(4) (2)ನೇ ಉಪ–ಪ್ರಕರಣದ ಅಡಿಯಲ್ಲಿ ಕಾರ್ಯದರ್ಶಿಯು ಮಾಡಿದ ಅದೇಶದ ವಿರುದ್ಧ ಕಾರ್ಯನಿರ್ವಾಹಕ ಅಧಿಕಾರಿಗೆ ಮತ್ತು (3)ನೇ ಉಪ–ಪ್ರಕರಣದ ಅಡಿಯಲ್ಲಿ ಗ್ರಾಮ ಪಂಚಾಯತಿಯು ಮಾಡಿದ ಆದೇಶದ ವಿರುದ್ಧ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗೆ ಅಪೀಲು ಮಾಡಿಕೊಳ್ಳುವ ಅವಕಾಶ ಇರತಕ್ಕದ್ದು

**xx** **xx** **xx**

**123. ಸ್ಥಾನಗಳ ಮೀಸಲಾತಿ.**– (1) **xx** **xx** **xx**

(3) ತಾಲ್ಲೂಕು ಪಂಚಾಯತಿಯಲ್ಲಿ, ಅನುಸೂಚಿತ ಜಾತಿಗಳು, ಅನುಸೂಚಿತ ಪಂಗಡಗಳು ಮತ್ತು ಹಿಂದುಳಿದ ವರ್ಗಗಳಿಗೆ ಸೇರಿದ ಪ್ರತಿಯೊಂದು ಪ್ರವರ್ಗಕ್ಕೆ ಮೀಸಲಿರಿಸಲಾದ ಹಾಗೂ ಮೀಸಲಿರಿಸದ ಸ್ಥಾನಗಳ ಮೂರನೇ ಒಂದರಷ್ಟಕ್ಕೆ ಕಡಿಮೆಯಿಲ್ಲದ ಸ್ಥಾನಗಳ್ನು ಮಹಿಳೆಯರಿಗೆ ರಾಜ್ಯ ಚುನಾವಣಾ ಆಯೋಗವು ಮೀಸಲಿರಿಸತಕ್ಕದ್ದು:

ಪರಂತು, (1) (2) ಮತ್ತು (3)ನೇ ಉಪ–ಪ್ರಕರಣಗಳ ಮೇರೆಗೆ ಮೀಸಲಿರಿಸಲಾದ ಸ್ಥಾನಗಳನ್ನು ತಾಲ್ಲೂಕಿನಲ್ಲಿನ ವಿವಿಧ ಚುನಾವಣಾ ಕ್ಷೇತ್ರಗಳಿಗೆ ಸರದಿಯ ಪ್ರಕಾರ ಹಂಚತಕ್ಕದ್ದು:

ಮತ್ತು ಪರಂತು, ಈ ಪ್ರಕರಣದಲ್ಲಿ ಅಡಕವಾಗಿರುವುದಾವುದೂ ತಾಲ್ಲೂಕು ಪಂಚಾಯತಿಯಲ್ಲಿ ಯಾರಿಗಾಗಿ ಸ್ಥಾನಗಳನ್ನು ಮೀಸಲಿರಿಸಲಾಗಿದೆಯೋ, ಆ ಅನುಸೂಚಿತ ಜಾತಿಗಳು ಅಥವಾ ಅನುಸೂಚಿತ ಪಂಗಡಗಳು ಅಥವಾ ಹಿಂದುಳಿದ ವರ್ಗಗಳು ಅಥವಾ ಮಹಿಳೆಯರನ್ನು ಅಂಥ ತಾಲ್ಲೂಕು ಪಂಚಾಯತಿಯಲ್ಲಿ ಮೀಸಲು ಇರಿಸದೇ ಇರುವ ಸ್ಥಾನಗಳಿಗೆ ಚುನಾವಣೆಗೆ ನಿಲ್ಲುವುದನ್ನು ತಡೆಗಟ್ಟುವುದೆಂದು ಭಾವಿಸತಕ್ಕದ್ದಲ್ಲ.

**xx** **xx** **xx**

**130. ಮತ ನೀಡುವ ವಿಧಾನ ಮತ್ತು ಚುನಾವಣೆಗಾಗಿ ಪ್ರಕ್ರಿಯೆ.**– (1) ಪ್ರತಿಯೊಬ್ಬ ಮತದಾರನು, ಎಷ್ಟು ಸದಸ್ಯರು ಚುನಾಯಿತರಾಗಬೇಕಾಗಿದೆಯೋ ಅಷ್ಟು ಮತಗಳನ್ನು ಹೊಂದಿರತಕ್ಕದ್ದು. ಯಾವನೇ ಮತದಾರನು, ಯಾವನೇ ಅಭ್ಯರ್ಥಿಗೆ ಒಂದಕ್ಕಿಂತ ಹೆಚ್ಚು ಮತಗಳನ್ನು ಕೊಡತಕ್ಕದ್ದಲ್ಲ.

(2) ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ತಾಲ್ಲೂಕು ಪಂಚಾಯತಿಗೆ ಚುನಾವಣೆಗಳನ್ನು ಗೊತ್ತುಪಡಿಸಬಹುದಾದಂಥ ನಿಯಮಗಳಿಗನುಸಾರವಾಗಿ ಮತದಾನದ ಮೂಲಕ ನಡೆಸತಕ್ಕದ್ದು.

(3) 26, 27, 28, 29, 3೦, 31, 31ಎ, 31ಬಿ, 32, 33, 34, 35, 36, 37, 38 ,39, ಮತ್ತು 40ನೇ ಪ್ರಕರಣಗಳ ಉಪಬಂಧಗಳು, ಗ್ರಾಮ ಪಂಚಾಯತಿಗಳ ಚುನಾವಣೆಗಳಿಗೆ ಅನ್ವಯವಾಗುವಂತೆಯೇ ತಾಲ್ಲೂಕು ಪಂಚಾಯತಿ ಚುನಾವಣೆಗಳಿಗೆ ಸಬಂಧಿಸಿದಂತೆಯೂ ಅನ್ವಯವಾಗತಕ್ಕದ್ದು.

**xx** **xx** **xx**

**138. ಅಧ್ಯಕ್ಷ, ಉಪಾಧ್ಯಕ್ಷನ ಚುನಾವಣೆ ಮತ್ತು ಹುದ್ದೆಯ ಅವಧಿ.**- (1) **xx** **xx**

(2) ಸರ್ಕಾರವು ಗೊತ್ತುಪಡಿಸಿರುವ ರೀತಿಯಲ್ಲಿ,-

(ಎ) **xx** **xx** **xx**

(ಸಿ) ರಾಜ್ಯದಲ್ಲಿರುವ ತಾಲ್ಲೂಕು ಪಂಚಾಯತಿಗಳ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಹುದ್ದೆಗಳ ಒಟ್ಟು ಸಂಖ್ಯೆಯಲ್ಲಿ, ಅನುಸೂಚಿತ ಜಾತಿಗಳ, ಅನುಸೂಚಿತ ಪಂಗಡಗಳ ಮತ್ತು ಹಿಂದುಳಿದ ವರ್ಗಗಳ ಪ್ರತಿಯೊಂದು ಪ್ರವರ್ಗಕ್ಕೂ ಮೀಸಲಿಟ್ಟಿರುವ ಹುದ್ದೆಗಳಲ್ಲಿ ಮತ್ತು ಮೀಸಲಿಟ್ಟಿರದ ಹುದ್ದೆಗಳಲ್ಲಿ ಮೂರನೇ ಒಂದರಷ್ಟಕ್ಕೆ ಕಡಿಮೆ ಇಲ್ಲದಷ್ಟು ಹುದ್ದೆಗಳನ್ನು ಮಹಿಳೆಯರಿಗಾಗಿ ಮೀಸಲಿಡತಕ್ಕದ್ದು:

ಪರಂತು, ಈ ಉಪ ಪ್ರಕರಣದಡಿಯಲ್ಲಿ ಮೀಸಲಿರಿಸಿರುವ ಹುದ್ದೆಗಳನ್ನು ಬೇರೆ ಬೇರೆ ತಾಲ್ಲೂಕು ಪಂಚಾಯತಿಗಳಿಗೆ ಸರದಿಯ ಪ್ರಕಾರ ಹಂಚಿಕೆ ಮಾಡತಕ್ಕದ್ದು.

**ವಿವರಣೆ.**- ಸಂದೇಹಗಳ ನಿವಾರಣೆಗಾಗಿ, ಈ ಉಪ-ಪ್ರಕರಣದಡಿ ಹುದ್ದೆಗಳ ಮೀಸಲಾತಿಯ ಉದ್ದೇಶಗಳಿಗಾಗಿ, ಸರದಿಯ ಸೂತ್ರವು, 1993ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮವು ಪ್ರಾರಂಭವಾದ ತರುವಾಯ ನಡೆಯುವ ಪ್ರಥಮ ಚುನಾವಣೆಯಿಂದ ಪ್ರಾರಂಭವಾಗತಕ್ಕದ್ದೆಂದು ಈ ಮೂಲಕ ಘೋಷಿಸಲಾಗಿದೆ.

**xx** **xx** **xx**

**162. ಸ್ಥಾನಗಳ ಮೀಸಲಾತಿ.**- (1) **xx** **xx**

(3) ಅನುಸೂಚಿತ ಜಾತಿಗಳ, ಅನುಸೂಚಿತ ಪಂಗಡಗಳ ಮತ್ತು ಹಿಂದುದಳಿದ ವರ್ಗಗಳ ವ್ಯಕ್ತಿಗಳ ಪ್ರತಿಯೊಂದು ಪ್ರವರ್ಗಕ್ಕೂ ಮೀಸಲಿಟ್ಟಿರುವ ಹುದ್ದೆಗಳಲ್ಲಿ ಮತ್ತು ಮೀಸಲಿಟ್ಟಿರದ ಹುದ್ದೆಗಳಲ್ಲಿ, ಮಹಿಳೆಯರಿಗಾಗಿ, ಮೂರನೇ ಒಂದು ಭಾಗಕ್ಕಿಂತ ಕಡಿಮೆ ಅಲ್ಲದಷ್ಟು ಹುದ್ದೆಗಳನ್ನು ಮೀಸಲಿಡತಕ್ಕದ್ದು:

ಪರಂತು, (1)ನೇ, (2)ನೇ ಮತ್ತು (3)ನೇ ಉಪಪ್ರಕರಣಗಳ ಅಡಿಯಲ್ಲಿ ಮೀಸಲಿಟ್ಟಿರುವ ಸ್ಥಾನಗಳನ್ನು ಸರದಿಯ ಪ್ರಕಾರ ಜಿಲ್ಲೆಯಲ್ಲಿರುವ ವಿವಿಧ ಚುನಾವಣಾ ಕ್ಷೇತ್ರಗಳಿಗೆ ಹಂಚಿಕೆ ಮಾಡತಕ್ಕದ್ದು:

ಮತ್ತು ಪರಂತು, ಈ ಪ್ರಕರಣದಲ್ಲಿರುವುದು ಯಾವುದೂ, ಯಾವ ಅನುಸೂಚಿತ ಜಾತಿಗಳ ಮತ್ತು ಅನುಸೂಚಿತ ಪಂಗಡಗಳ ಅಥವಾ ಹಿಂದುಳಿದ ವರ್ಗಗಳ ಸದಸ್ಯರಿಗಾಗಿ ಅಥವಾ ಮಹಿಳೆಯರಿಗಾಗಿ ಜಿಲ್ಲಾ ಪಂಚಾಯತಿಯಲ್ಲಿ ಸ್ಥಾನಗಳನ್ನು ಮೀಸಲಿಡಲಾಗಿದೆಯೋ ಅಂಥ ಮಹಿಳೆಯರು ಅಥವಾ ಸದಸ್ಯರು, ಅಂಥ ಜಿಲ್ಲಾ ಪಂಚಾಯತಿಯಲ್ಲಿ ಮೀಸಲಿರಿಸಿಲ್ಲದ ಯಾವುವೇ ಸ್ಥಾನಗಳಿಗೆ ಚುನಾವಣೆಗೆ ನಿಲ್ಲದಂತೆ ತಡೆಯುಂಟು ಮಾಡುತ್ತದೆಯೆಂದು ಭಾವಿಸತಕ್ಕದ್ದಲ್ಲ.

**xx** **xx** **xx**

**169. ಮತ ನೀಡುವ ವಿಧಾನ ಮತ್ತು ಚುನಾವಣಾ ಕಾರ್ಯ ವಿಧಾನ.**- (1) ಪ್ರತಿಯೊಬ್ಬ ಮತದಾರನು, ಎಷ್ಟು ಸದಸ್ಯರು ಚುನಾಯಿತರಾಗಬೇಕಾಗಿದೆಯೋ ಅಷ್ಟು ಮತಗಳನ್ನು ಹೊಂದಿರತಕ್ಕದ್ದು. ಯಾವನೇ ಮತದಾರನು ಯಾವನೇ ಅಭ್ಯರ್ಥಿಗೆ ಒಂದಕ್ಕಿಂತ ಹೆಚ್ಚು ಮತಗಳನ್ನು ಕೊಡತಕ್ಕದ್ದಲ್ಲ.

(2) ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ಜಿಲ್ಲಾ ಪಂಚಾಯತಿಗೆ ಚುನಾವಣೆಗಳನ್ನು ಗೊತ್ತುಪಡಿಸಬಹುದಾದಂಥ ನಿಯಮಗಳಿಗನುಸಾರವಾಗಿ ಮತದಾನದ ಮೂಲಕ ನಡೆಸತಕ್ಕದ್ದು.

**xx** **xx** **xx**

**177. ಅಧ್ಯಕ್ಷ, ಉಪಾಧ್ಯಕ್ಷನ ಚುನಾವಣೆ ಮತ್ತು ಹುದ್ದೆಯ ಅವಧಿ.**- (1) **xx** **xx**

(2) ಸರ್ಕಾರವು, ಗೊತ್ತುಪಡಿಸಿರುವ ರೀತಿಯಲ್ಲಿ,-

(ಎ) **xx** **xx** **xx**

(ಸಿ) ರಾಜ್ಯದಲ್ಲಿರುವ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಹುದ್ದೆಗಳ ಒಟ್ಟು ಸಂಖ್ಯೆಯಲ್ಲಿ, ಅನುಸೂಚಿತ ಜಾತಿಗಳ, ಅನುಸೂಚಿತ ಪಂಗಡಗಳ ಮತ್ತು ಹಿಂದುಳಿದ ವರ್ಗಗಳ ಪ್ರತಿಯೊಂದು ಪ್ರವರ್ಗಕ್ಕೂ ಮೀಸಲಿಟ್ಟಿರುವ 1993 ಹುದ್ದೆಗಳಲ್ಲಿ ಮತ್ತು ಮೀಸಲಿಟ್ಟಿರದ ಹುದ್ದೆಗಳಲ್ಲಿ ಮೂರನೇ ಒಂದರಷ್ಟಕ್ಕೆ ಕಡಿಮೆ ಇಲ್ಲದಷ್ಟು ಹುದ್ದೆಗಳನ್ನು ಮಹಿಳೆಯರಿಗಾಗಿ ಮೀಸಲಿಡತಕ್ಕದ್ದು:

ಪರಂತು, ಈ ಪ್ರಕರಣದಡಿಯಲ್ಲಿ ಮೀಸಲಿರಿಸಿರುವ ಹುದ್ದೆಯನ್ನು ಬೇರೆ ಬೇರೆ ಜಿಲ್ಲಾ ಪಂಚಾಯತಿಗಳಿಗೆ ಸರದಿ ಪ್ರಕಾರ ಹಂಚಿಕೆ ಮಾಡತಕ್ಕದ್ದು.

**ವಿವರಣೆ.**- ಸಂದೇಹಗಳ ನಿವಾರಣೆಗಾಗಿ, ಈ ಉಪ ಪ್ರಕರಣದಡಿ ಹುದ್ದೆಗಳ ಮೀಸಲಾತಿಯ ಉದ್ದೇಶಗಳಿಗಾಗಿ ಸರದಿಯ ಸೂತ್ರವು 1993ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮವು ಪ್ರಾರಂಭವಾದ ತರುವಾಯ ನಡೆಯುವ ಪ್ರಥಮ ಸಾಮಾನ್ಯ ಚುನಾವಣೆಯಿಂದ ಪ್ರಾರಂಭವಾಗತಕ್ಕದ್ದೆಂದು ಈ ಮೂಲಕ ಘೋಷಿಸಲಾಗಿದೆ.

**xx** **xx** **xx**

**200. ತೆರಿಗೆಗಳು ಮತ್ತು ಇತರ ಬಾಕಿಗಳ ವಸೂಲಿ.**- (1)

**xx** **xx** **xx**

(3) ಕಾರ್ಯದರ್ಶಿ ಅಥವಾ ಈ ಬಗ್ಗೆ ಅವನಿಂದ ವಿದ್ಯುಕ್ತವಾಗಿ ಪ್ರಾಧಿಕೃತನಾದ ಅಧಿಕಾರಿಯು (1)ನೇ ಉಪಪ್ರಕರಣದ ಮೇರೆಗೆ ಪ್ರತಿಯೊಂದು ಬಿಲ್ಲು ಕೊಡುವುದನ್ನು ಮತ್ತು (2)ನೇ ಉಪಪ್ರಕರಣದ ಮೇರೆಗೆ ಪ್ರತಿಯೊಂದು ತಗಾದೆ ಆದೇಶ ಜಾರಿಗೊಳಿಸುವುದನ್ನು,-

(ಎ) ಯಾವ ವ್ಯಕ್ತಿಯ ಹೆಸರಿಗೆ ಅದನ್ನು ಕಳುಹಿಸಬೇಕಾಗಿದೆಯೋ ಆ ವ್ಯಕ್ತಿಗೆ ಆ ಬಿಲ್ಲು ಅಥವಾ ಆದೇಶವನ್ನು ಕೊಡುವ ಅಥವಾ ಸಲ್ಲಿಸುವ ಮೂಲಕ, ಅಥವಾ

(ಬಿ) ಅಂಥ ವ್ಯಕ್ತಿಯು ಸಿಕ್ಕದಿದ್ದರೆ, ಪಂಚಾಯತಿ ಪ್ರದೇಶದ ಪರಿಮಿತಿಗಳೊಳಗೆ ಆಗಿದ್ದರೆ, ಬಿಲ್ಲು ಅಥವಾ ಆದೇಶವನ್ನು, ಅವನು ವಾಸ ಮಾಡುತ್ತಿದ್ದನೆಂದು ತಿಳಿದುಬಂದ ಕೊನೆಯ ವಾಸ ಸ್ಥಳದಲ್ಲಿ ಅದನ್ನು ಬಿಡುವ ಮೂಲಕ ಅಥವಾ ಬಿಲ್ಲು ಅಥವಾ ಆದೇಶವನ್ನು ಅವನ ಕುಟುಂಬದ ಯಾರೇ ವಯಸ್ಕ ಸದಸ್ಯ ಅಥವಾ ನೌಕರನಿಗೆ ಕೊಡುವ ಅಥವಾ ಸಲ್ಲಿಸುವ ಮೂಲಕ, ಅಥವಾ

(ಸಿ) ಅಂಥ ವ್ಯಕ್ತಿಯು ಪಂಚಾಯತಿ ಪ್ರದೇಶದ ಪರಿಮಿತಿಗಳೊಳಗೆ ವಾಸಿಸುತ್ತಿಲ್ಲದಿದ್ದರೆ ಮತ್ತು ಬಿಲ್ಲು ಅಥವಾ ಆದೇಶ ಹೊರಡಿಸುವುದನ್ನು ನಿರ್ದೇಶಿಸುವ ವ್ಯಕ್ತಿಗೆ ವಿಳಾಸವು ತಿಳಿದಿದ್ದರೆ ಬಿಲ್ಲು ಅಥವಾ ಆದೇಶವನ್ನು ಅಂಥ ವ್ಯಕ್ತಿಗೆ ಸದರಿ ವಿಳಾಸವಿರುವ ಒಂದು ಲಕೋಟೆಯನ್ನು ರಿಜಿಸ್ಟರ್ಡ್ ಅಂಚೆಯ ಮೂಲಕ ಕಳುಹಿಸುವ ಮೂಲಕ, ಅಥವಾ

(ಡಿ) ಮೇಲೆ ಹೇಳಿದ ಯಾವುದೇ ವಿಧಾನ ಲಭ್ಯವಿಲ್ಲದಿದ್ದರೆ, ಆಗ ಬಿಲ್ಲು ಅಥವಾ ಆದೇಶವು ಯಾವ ಕಟ್ಟಡ ಅಥವಾ ಭೂಮಿಗೆ ಸಂಬಂಧಪಡುವುದೋ ಅದರ ಎದ್ದು ಕಾಣುವ ಭಾಗದಲ್ಲಿ ಅದನ್ನು ಅಂಟಿಸುವಂತೆ ಮಾಡುವ ಮೂಲಕ,

-ಜಾರಿಗೊಳಿಸತಕ್ಕದ್ದು.

**xx** **xx** **xx**

**241. ಗ್ರಾಮ ಪಂಚಾಯತಿಯ ಲೆಕ್ಕಗಳ ಮತ್ತು ಬಜೆಟ್‌ನ ಮಂಡನೆ.**- (1) ಕಾರ್ಯದರ್ಶಿಯು, ಮುಂದಿನ ಮಾರ್ಚ್ ಮೂವತ್ತೊಂದನೇ ದಿನದಂದು ಕೊನೆಗೊಳ್ಳುವ ಆರ್ಥಿಕ ವರ್ಷದ ವಾಸ್ತವಿಕ ಮತ್ತು ನಿರೀಕ್ಷಿತ ಜಮೆ ಮತ್ತು ವೆಚ್ಚಗಳ ಸಂಪೂರ್ಣ ಲೆಕ್ಕವನ್ನು ಸಿದ್ಧಪಡಿಸತಕ್ಕದ್ದು ಮತ್ತು ಮುಂಬರುವ ಏಪ್ರಿಲ್ ಮೊದಲನೇ ದಿನದಂದು ಪ್ರಾರಂಭಗೊಳ್ಳುವ ಆರ್ಥಿಕ ವರ್ಷಕ್ಕಾಗಿ ಗ್ರಾಮ ಪಂಚಾಯತಿಯ ಆದಾಯ ಮತ್ತು ವೆಚ್ಚದ ಬಜೆಟ್ ಅಂದಾಜಿನ ಜೊತೆಗೆ ಅದನ್ನು ಫೆಬ್ರವರಿ ಮೊದಲನೇ ದಿನದ ಮತ್ತು ಮಾರ್ಚ್ ಹತ್ತನೇ ದಿನದ ನಡುವೆ ನಡೆಯುವ ಸಭೆಯಲ್ಲಿ ಮಂಡಿಸತಕ್ಕದ್ದು.

**xx** **xx** **xx**

(5) (1)ನೇ ಉಪ ಪ್ರಕರಣದಲ್ಲಿ ಹೇಳಿರುವ ದಿನಾಂಕದಂದು, ಅಥವಾ ಅದಕ್ಕೂ ಮೊದಲು ಬಜೆಟ್ ಅಂದಾಜನ್ನು ಅಂಗೀಕರಿಸಲು ಗ್ರಾಮ ಪಂಚಾಯತಿಯು ತಪ್ಪಿದಲ್ಲಿ, ಕಾರ್ಯದರ್ಶಿಯು ಬಜೆಟ್ ಅಂದಾಜನ್ನು ತಾಲ್ಲೂಕು ಪಂಚಾಯತಿಗೆ ಕಳುಹಿಸತಕ್ಕದ್ದು ಮತ್ತು ಅದು ಅದನ್ನು ಮಾರ್ಪಾಟಿನೊಂದಿಗೆ ಅಥವಾ ಮಾರ್ಪಾಟಿಲ್ಲದೆ ಅನುಮೋದಿಸತಕ್ಕದ್ದು. ತಾಲ್ಲೂಕು ಪಂಚಾಯತಿಯು ಹಾಗೆ ಅನುಮೋದಿಸಿದ ಬಜೆಟ್ಟನ್ನು ಕಾರ್ಯನಿರ್ವಾಹಕ ಅಧಿಕಾರಿಯು ಪ್ರಮಾಣೀಕರಿಸತಕ್ಕದ್ದು ಮತ್ತು ಆ ತರುವಾಯ, ಅದನ್ನು ಗ್ರಾಮ ಪಂಚಾಯತಿಯು ಯಥಾವಿಧಿಯಾಗಿ ಅನುಮೋದಿಸಿದುದೆಂಬಂತೆ ಭಾವಿಸತಕ್ಕದ್ದು.

**xx** **xx** **xx**

## KARNATAKA LEGISLATIVE COUNCIL
## HUNDRED AND THIRTEENTH SESSION

## THE KARNATAKA PANCHAYATH RAJ (AMENDMENT) BILL, 2010
## (L.C. Bill No. 03 of 2010)

A Bill further to amend the Karnataka Panchayath Raj Act, 1993.

Whereas it is expedient further to amend the Karnataka Panchayath Raj Act, 1993, (Karnataka Act 14 of 1993) for the purposes hereinafter appearing ;

Be it enacted by the Karnataka State Legislative in the Sixty First year of the republic of India as follows ;

**1. Short title and commencement.-** (1) This Act may be called the Karnataka Panchayath Raj (Amendment) Act, 2010.

(2) It shall come into force at once.

**2. Amendment of section 2.-** In section 2 of the Karnataka Panchayath Raj Act, 1993 (Karnataka Act 14 of 1993) (hereinafter referred to as the principal Act), after clause (28), the following shall be inserted, namely :-

"(28-A) "Panchayath Development Officer" means the Panchayath Development Officer of the Grama Panchayath;"

**3. Amendment of section 5.-** In section 5 of the principal Act, in sub-section (4), for the words "one third", the words "fifty percent" shall be substituted.

**4. Amendment of section 7.-** In section 7 of the Principal Act, after sub-section (2), the following shall be inserted, namely :-

"(3) Not withstanding anything contained in this Act or the rules made thereunder, the giving and recording of votes in the Grama Panchayat election by voting machines in such manner as may be prescribed, may be adopted in such constituency or constituencies as the State Election commission may having regard to the circumstances of each case specify.

**Explanation :** For the purpose of this section, "Voting Machine" means any machine or apparatus whether operated electronically or otherwise used for giving or recording of votes and any reference to a ballot box or ballot paper in this Act or the rules made there under shall, save as otherwise provided, be construed as including a reference to such voting machine wherever such voting machine is used at any election."

**5. Amendment of section 44.-** In section 44 of the principal Act, in sub-section (2), in clause (c), for the words "one third", the words "fifty percent" shall be substituted.

**6. Amendment of section 111.-** in Section III of the Principal Act, in sub-section (1), for the words "Secretary" the words "Panchayat Development Officer and Secretary" shall be substituted.

**7. Amendment of section 112.-** In section 112 of the Principal Act, in sub-section (2), for the word "Secretary" the words "Panchayat Development Officer, Secretary and Accounts Assistant" shall be substituted.

**8. Amendment of section 113.-** In section 113 of the Principal Act, in sub-section (2) and (4), for the word "Secretary" the words "Panchayat Development Officer" shall be substituted.

**9. Amendment of section 123.-** In section 123 of the principal Act, in sub-section (3), for the words "one third", the words "fifty percent" shall be substituted.

**10. Amendment of section 130.-** In section 130 of the Principal Act, after sub-section (2), the following shall be inserted, namely :-

"(2A) Notwithstanding anything contained in this Act or the rules made thereunder, the giving and recording of votes in taluk panchayath elections by voting machines in such manner as may be prescribed, may be adopted in such constituency or constituencies as the State election commission may having regard to the circumstances of each case specify.

**Explanation :** For the purpose of this section, "Voting Machine" means any machine or apparatus whether operated electronically or otherwise used for giving or recording of votes and any reference to a ballot box or ballot paper in this Act or the rules made thereunder shall, save as otherwise provided, be construed as including a reference to such voting machine wherever such voting machine is used at any election".

**11. Amendment of section 138.-** In section 138 of the Principal Act, in sub-section (2), in clause (c), for the words "one third", the words "fifty percent" shall be substituted.

**12. Amendment of section 162.-** In section 162 of the principal Act, in sub-section (3), of the words "one third", the words "fifty percent" shall be substituted.

**13. Amendment of section 169.-** In section 169 of the Principal Act, after sub-section (2), the following shall be inserted, namely:-

"(2A) Not withstanding anything contained in this Act or the rules made thereunder, the giving and recording of votes in zilla panchayath elections by voting machines in such manner as may be prescribed,

may be adopted in such constituency or constituencies as the State Election Commission may having regard to the circumstances of each case specify

**Explanation:** For the purpose of this section "Voting machine" means any machine or apparatus whether operated electronically or otherwise used for giving or recording of votes and any reference to a ballot box or ballot paper in this Act or the rules made there under shall, save as otherwise provided, be construed as including a reference to such voting machine wherever such voting machine is used at any election."

**14. Amendment of section 177.-** In section 177 of the principal Act, in sub-section (2), in clause (c), for the words "one third", the words "fifty percent" shall be substituted.

**15. Amendment of section 200.-** In section 200 of the Principal Act, in sub-section(3), for the word "secretary" the words "Panchayat Development Officer" shall be substituted..

**16. Amendment of section 241.-** In section 241 of the Principal Act, in sub-sections(1) and (5), for the word "secretary" the words "Panchayat Development Officer" shall be substituted

**STATEMENT OF OBJECTS AND REASONS**

It is considered necessary to amend the Karnataka Panchayat Raj Act, 1993.

(1) to define " Panchayat Development Officer" and to provide for powers and functions, thereof.

(2) to notify election results quickly and precisely and to introduce modern technology in the election system of Panchyath Raj Institutions by using electronic voting machines in the elections to Grama Panchayat, Taluk Panchayat and Zilla Panchayat in the State;

(3) to provide fifty percent reservation for women in seat and the offices in all the three tiers of Panchyath Raj Institutions.

Hence the Bill.

**FINANCIAL MEMORANDUM**

There is no extra expenditure involved in the proposed measure.

**JAGADISH SHETTAR**
Minister for Rural Development
and Panchayat Raj

**V. SHREESH**
Secretary
Karnataka Legislative Council

**ANNEXURE**

**Extract from the Karnataka Panchayath Raj Act, 1993 (Karnataka Act 14 of 1993)**

**xx** **xx** **xx**

**2. Definitions.-**In this Act, unless the context otherwise requires,-

Xx xx xx

(28) "panchayat area" means any area declared as panchayat area under section 4;

Xx xx xx

**5. Constitution of Grama Panchayat**.-(1) The Grama Panchayat shall consist of such number of elected members as may be notified from time to time by the State Election Commission, at the rate of one member for every four hundred population or part thereof of the panchayat area:

Xx xx xx

(4) Not less than one third of the seats reserved in each category, for persons belonging to the Scheduled Castes, Scheduled Tribes and Backward classes and of the non-reserved seats in the Grama Panchayat shall, subject to the general or special order of the State Election Commission, be reserved by the Deputy Commissioner for women.

Xx xx xx

**7. Method of voting and procedure for election.**-(1) Every voter shall have as many votes as there are members to be elected for the constituency. No voter shall give more than one vote to any one candidate.

(2) Subject to the provisions of this Act, elections to the Grama Panchayat shall be held by ballot on non-party basis in accordance with such rules as may be prescribed.

**Xx xx xx**

**44. Election of Adhyaksha and Upadhyaksha,-**

**Xx xx xx**

(2) Subject to the general or special order of the State Election Commission, the Deputy Commissioner shall reserve,-

Xx xx xx

(c) not less than one third of the total number of offices of Adhyaksha and Upadhyaksha of Grama Panchayats in the State from each of the categories which are reserved for persons belonging to the Scheduled Castes, Scheduled Tribe and Backward Classes and of those which are non-reserved, for women;

Provided that the offices reserved under this sub-section shall be allotted by rotation to different Grama Panchayats.

**Explanation.-**For the removal of doubts it is hereby declared that the principle of rotation for purpose of reservation of offices under this section shall commence from the first election to be held after the commencement of the Karnataka Panchayat Raj Act, 1993.

Xx xx xx

**111. Secretary.**-(1) Every Grama Panchayat shall have a whole time Secretary who shall be an officer of the Government and shall draw his salary and allowance from the fund of the Grama Panchayat, after the same is credited to the Grama Panchayath fund by the Government.

Xx xx xx

**112. Staffing pattern and schedule of employees.-**(1) The Government may, by order, specify the staffing pattern, the scales of pay and mode of recruitment of staff of Grama Panchayats.

(2) The Grama Panchayat shall, subject to sub-section (1), determine and submit for approval of the Chief Executive Officer a schedule of employees specifying the designations and grades and the salaries and allowances payable to its officers other than the Secretary required for carrying out the duties imposed upon the Grama Panchayat by or under this Act.

**113. Appointment and control of employees,-**

Xx xx xx

(2) The Secretary may, by order, fine or withhold, the increment of any employee appointed by the Grama Panchayat.

(3) The Grama Panchayat may reduce in rank, remove or dismiss any employee appointed by it.

(4) An appeal shall lie against an order passed by the Secretary under sub-section (2) to the Executive Officer and against an order passed by the Grama Panchayat under sub-section (3) to the Chief Executive Officer

Xx xx xx

**123. Reservation of Seats.**-(1) Seats [1][shall be reserved by the State Election Commission in a Taluk Panchayat,-

Xx xx xx

(3) Not less than one third of the seats reserved for each category of persons belonging to the Scheduled Castes, Scheduled Tribes and Backward Classes and those of the non-reserved seats in a Taluk Panchayat shall be reserved by the State Election Commission for women:

Provided that the seats reserved under sub-sections (1), (2), and (3) shall be allotted by rotation to different constituencies in the Taluk:

Provided further that nothing contained in this section shall be deemed to prevent the persons belonging to the Scheduled Castes or Scheduled Tribes or Backward classes or women for whom seats have been reserved in a Taluk Panchayat from standing for election to the non-reserved seats in such Taluk Panchayat.

**130. Method of voting and procedure for election.-**(1) Every elector shall have as many votes as there are members to be elected. No elector shall give more than one vote to any one candidate.

(2) Subject to the provisions of this Act, elections to the Taluk Panchayat shall be held by ballot in accordance with such rules as may be prescribed.

(3) The provisions of sections 26, 27, 28, 29, 30, 31, 31A, 31B, 32, 33, 34, 35, 36, 37, 38, 39, and 40 shall apply in respect of elections to Taluk Panchayat as they apply to elections to Grama Panchayats.

Xx xx xx

**138. Election of Adhyaksha and Upadhyaksha and term of office.-**

Xx xx xx

(2) There shall be reserved by the Government, in the prescribed manner,-

Xx xx xx

(c) not less than one-third of the total number of offices of Adhyaksha and Upadhyaksha of the Taluk Panchayats in the State from each of the categories reserved for persons belonging to the Scheduled Castes, Scheduled Tribes and backward Classes and those which are non-reserved, for women:

Provided that the offices reserved under this sub-section shall be allotted by rotation to different Taluk Panchayats.

**Explanation.-**For the removal of doubts it is hereby declared that the principle of rotation for the purposes of reservation of offices under this subsection shall commence from the first election to be held after the commencement of the Karnataka Panchayat Raj Act, 1993.

Xx xx xx

**162. Reservation of seats.**-

Xx xx xx

(3) Not less than one third of the seats reserved for each category of persons belonging to the Scheduled Castes, Scheduled Tribes and Backward Classes and those of the non-reserved seats in the Zilla Panchayat shall be reserved by the State Election Commission for women:

Provided that the seats reserved under sub-sections (1), (2) and (3) shall be allotted by rotation to different constituencies in the district:

Provided further that nothing contained in this section shall be deemed to prevent the persons belonging to the Scheduled Castes or Scheduled Tribes or Backward Classes or women for whom seats have been reserved in a Zilla Panchayat from standing for election to the non-reserved seats in such Zilla Panchayat.

Xx xx xx

**169. Method of voting and procedure for election.-**(1) Every elector shall have as many votes as there are members to be elected. No elector shall give more than one vote to any one candidate.

(2) Subject to the provisions of this Act, election to the Zilla Panchayat shall be held by ballot in accordance with such rules as may be prescribed.

Xx xx xx

**177. Election of Adhyaksha, Upadhyaksha and term of office.**-

Xx xx xx

(2) There shall be reserved by the Government, in the prescribed manner,-

Xx xx xx

(c) not less than one-third of the total number of offices of Adhyaksha and Upadhyaksha in the State from each categories reserved for person belonging to the Scheduled Castes, Scheduled Tribes and Backward Classes and those which are non-reserved, for women:

Provided that the offices reserved under this section shall be allotted by rotation to different Zilla Panchayats.

**Explanation.-**For the removal of doubts it is hereby declared that the principle of rotation for the purposes of reservation of offices under this subsection shall commence from the first ordinary election to be held after the commencement of the Karnataka Panchayat Raj Act, 1993.

Xx xx xx

**200. Recovery of taxes and other dues.-**

Xx xx xx

(3) The presentation of every bill under sub-section (1) and the service of every notice of demand under sub-section (2), shall be effected by the Secretary or an officer duly authorised by him in this behalf,-

(a) by giving or tendering the bill or notice to the person to whom it is addressed; or

(b) if such person is not found, by leaving the bill or notice at his last known place of abode, if within the limits of the panchayat area or by giving or tendering the bill or notice to some adult member or servant of his family; or

(c) if such person does not reside within the limits of the panchayat area and his address elsewhere is known to the person directing the issue of the bill or notice, then by forwarding the bill or notice to such person by registered post, under cover bearing the said address; or

(d) if none of the means aforesaid be available then by causing the bill or notice to be affixed on some conspicuous part of the building or land, if any, to which the bill or notice relates.

(a) tax on entertainment other than cinematograph shows;

(b) tax on vehicles, other than motor vehicles;

(c) tax on advertisement and hoardings;

**241. Presentation of accounts and budget of Grama Panchayat.-**(1) The Secretary shall prepare and lay before the Grama Panchayat at a meeting, which shall be held between the first day of February and the tenth day of March, a complete account of the actual and expected receipts and expenditure for the official year ending on the thirty-first day of March next following together with a budget estimate of the income and expenditure, of the Grama panchayat for the official year to commence on the first day of April next following.

Xx xx xx

(5) If the Grama Panchayat fails to pass the budget estimate on or before the date mentioned in sub-section (1), the Secretary shall forward the budget estimate to the Taluk Panchayat and it shall approve it with or without modification. The budget as approved by the Taluk Panchayat shall be certified by the Executive Officer and thereupon shall be deemed to have been duly approved by the Grama Panchayat.

Xx xx xx

ವಿ. ಶ್ರೀಶ್
ಸರ್ಕಾರದ ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

**ವಿಶೇಷ ಪತ್ರಿಕೆ**

| ಭಾಗ – IV-A | ಬೆಂಗಳೂರು, ಶುಕ್ರವಾರ, ಜುಲೈ ೧೬, ೨೦೧೦ (ಆಷಾಢ ೨೫, ಶಕ ವರ್ಷ ೧೯೩೨) | ನಂ. ೮೨೩ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/133/Bill/2010, Bangalore, Dated: 16th July, 2010**

The following Bill was introduced in Legislative Assembly on 16.7.2010.

**THE KARNATAKA ADVOCATES WELFARE FUND (AMENDMENT) BILL, 2010**

**(L.A. Bill No. 18 of 2010)**

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನಸಭೆ**

**ಆರನೇ ಅಧಿವೇಶನ**

**ಕರ್ನಾಟಕ ನ್ಯಾಯವಾದಿಗಳ ಕಲ್ಯಾಣ ನಿಧಿ (ತಿದ್ದುಪಡಿ) ವಿಧೇಯಕ, 2010**

**(2010ರ ವಿಧಾನಸಭೆಯ ವಿಧೇಯಕ ಸಂಖ್ಯೆ 18)**

ಕರ್ನಾಟಕ ನ್ಯಾಯವಾದಿಗಳ ಕಲ್ಯಾಣ ನಿಧಿ ಅಧಿನಿಯಮ, 1983ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ನ್ಯಾಯವಾದಿಗಳ ಕಲ್ಯಾಣ ನಿಧಿ ಅಧಿನಿಯಮ, 1983ನ್ನು (1985ರ ಕರ್ನಾಟಕ ಅಧಿನಿಯಮ 2) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:-

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.-** (1) ಈ ಅಧಿನಿಯಮವನ್ನು **ಕರ್ನಾಟಕ ನ್ಯಾಯವಾದಿಗಳ ಕಲ್ಯಾಣ ನಿಧಿ (ತಿದ್ದುಪಡಿ) ಅಧಿನಿಯಮ, 2010** ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು ಮತ್ತು ಈ ಅಧಿನಿಯಮದ ಬೇರೆ ಬೇರೆ ಉಪಬಂಧಗಳಿಗೆ ಬೇರೆ ಬೇರೆ ದಿನಾಂಕಗಳನ್ನು ಗೊತ್ತುಪಡಿಸಬಹುದು.

**2. 2ನೇ ಪ್ರಕರಣದ ತಿದ್ದುಪಡಿ.-** ಕರ್ನಾಟಕ ನ್ಯಾಯವಾದಿಗಳ ಕಲ್ಯಾಣ ನಿಧಿ ಅಧಿನಿಯಮ, 1983ರ (1985ರ ಕರ್ನಾಟಕ ಅಧಿನಿಯಮ 2) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 2ನೇ ಪ್ರಕರಣದಲ್ಲಿ,-

(i) (ಡಿ) ಖಂಡದ (iii)ನೇ ಉಪಖಂಡಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

"(iii) ಎಪ್ಪತ್ತೈದು ವರ್ಷಗಳ ವಯಸ್ಸಾದ ಮೇಲೆ ಅಥವಾ ಐವತ್ತು ವರ್ಷಗಳ ವೃತ್ತಿ ನಡೆಸುವುದನ್ನು ಪೂರ್ಣ ಗೊಳಿಸಿದ ಮೇಲೆ, ಇವೆರಡರಲ್ಲಿ ಯಾವುದು ಮೊದಲೋ ಆಗ ಸ್ವಯಂ ನಿವೃತ್ತಿ;"

(ii) (ಜಿಎ) ಖಂಡಕ್ಕೆ, ಈ ಮುಂದಿನ ಖಂಡವನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

"(ಜಿಎ) "ಶಾಶ್ವತ ಅಂಗವಿಕಲತೆ" ಎಂದರೆ, ಒಬ್ಬ ನ್ಯಾಯವಾದಿಯು ಸದಸ್ಯನಾದ ತರುವಾಯ, ಆತನು ನ್ಯಾಯವಾದಿಯಾಗಿ ವೃತ್ತಿ ನಡೆಸುವುದಕ್ಕೆ ಆತನನ್ನು ಸಂಪೂರ್ಣವಾಗಿ ಅಸಮರ್ಥನಾಗುವಂತೆ ಉಂಟಾದ ಮತ್ತು ನ್ಯಾಯವಾದಿಯು ವೃತ್ತಿ ನಡೆಸುತ್ತಿರುವಲ್ಲಿ ಜಿಲ್ಲಾ ಶಸ್ತ್ರಚಿಕಿತ್ಸಕನು (ಡಿಸ್ಟ್ರಿಕ್ಟ್ ಸರ್ಜನ್) ಹಾಗೆಂದು ಪ್ರಮಾಣೀಕರಿಸಿದ ಅಂಗವಿಕಲತೆ;"

(3) (ಜೆ) ಖಂಡದ ತರುವಾಯ, ಈ ಮುಂದಿನ ಖಂಡವನ್ನು ಸೇರಿಸತಕ್ಕದ್ದು, ಎಂದರೆ:-

"(ಜೆಜೆ) "ಅನುಸೂಚಿ" ಎಂದರೆ ಈ ಅಧಿನಿಯಮಕ್ಕೆ ಅನುಬಂಧಿಸಲಾದ ಅನುಸೂಚಿ."

**3. 4ನೇ ಪ್ರಕರಣದ ತಿದ್ದುಪಡಿ.-** ಮೂಲ ಅಧಿನಿಯಮದ 4ನೇ ಪ್ರಕರಣದ (4) ಮತ್ತು (5)ನೇ ಉಪ ಪ್ರಕರಣಗಳಲ್ಲಿ, "ನಾಲ್ಕು ವರ್ಷಗಳ" ಎಂಬ ಪದಗಳಿಗೆ "ಮೂರು ವರ್ಷಗಳ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**4. 9ನೇ ಪ್ರಕರಣದ ತಿದ್ದುಪಡಿ.-** ಮೂಲ ಅಧಿನಿಯಮದ 9ನೇ ಪ್ರಕರಣದ, (2)ನೇ ಉಪ ಪ್ರಕರಣದ (ಇ) ಖಂಡದಲ್ಲಿ, "16ನೇ ಪ್ರಕರಣಕ್ಕನುಸಾರವಾಗಿ" ಎಂಬ ಪದಗಳಿಗೆ "ಈ ಅಧಿನಿಯಮಕ್ಕನುಸಾರವಾಗಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**5. 13ನೇ ಪ್ರಕರಣದ ತಿದ್ದುಪಡಿ.-** ಮೂಲ ಅಧಿನಿಯಮದ 13ನೇ ಪ್ರಕರಣದ (2)ನೇ ಉಪ ಪ್ರಕರಣದಲ್ಲಿ, "ಸಂಘದ ನಿಯಮಗಳು ಅಥವಾ ಉಪವಿಧಿಗಳನ್ನು" ಎಂಬ ಪದಗಳಿಗೆ " ಬಾರ್ ಕೌನ್ಸಿಲ್ ಒದಗಿಸಿದ ಮಾದರಿ ಉಪವಿಧಿಗಳನ್ನು ಅಳವಡಿಸಿಕೊಂಡು ರಚಿಸಲಾದ ಮತ್ತು ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ, 1960ರ (1960ರ ಕರ್ನಾಟಕ ಅಧಿನಿಯಮ 17) ಅಡಿಯಲ್ಲಿ ನೋಂದಾಯಿತವಾದ ಸಂಘದ ನಿಯಮಗಳು ಅಥವಾ ಉಪವಿಧಿಗಳನ್ನು" ಎಂಬ ಪದಗಳು, ಅಂಕಿಗಳು ಮತ್ತು ಆವರಣ ಚಿಹ್ನೆಗಳನ್ನು ಪ್ರತಿಯೋಜಿಸತಕ್ಕದ್ದು.

**6. 15ನೇ ಪ್ರಕರಣದ ತಿದ್ದುಪಡಿ.-** ಮೂಲ ಅಧಿನಿಯಮದ 15ನೇ ಪ್ರಕರಣದ,-

(1) (1)ನೇ ಉಪ ಪ್ರಕರಣದಲ್ಲಿ,-

(ಎ) "ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್‌ನ ಪಟ್ಟಿಯಲ್ಲಿ ಹೆಸರನ್ನು ಹೊಂದಿರುವ ಪ್ರತಿಯೊಬ್ಬ ನ್ಯಾಯವಾದಿಯು" ಎಂಬ ಪದಗಳ ತರುವಾಯ "ಮತ್ತು ವಕಾಲತ್ತು ಪ್ರಮಾಣಪತ್ರವನ್ನು ಹೊಂದಿರುವ ಪ್ರತಿಯೊಬ್ಬ ವ್ಯಕ್ತಿಯು" ಎಂಬ ಪದಗಳನ್ನು ಸೇರಿಸತಕ್ಕದ್ದು;

(ಬಿ) "ನಿಯಮಿಸಬಹುದಾದಂಥ ನಮೂನೆಯಲ್ಲಿ ಒಂದು ತಿಂಗಳೊಳಗೆ ಎರಡುಸಾವಿರ ರೂಪಾಯಿಗಳ ಪ್ರವೇಶ ಶುಲ್ಕದೊಡನೆ" ಎಂಬ ಪದಗಳಿಗೆ "ನಿಯಮಿಸ ಬಹುದಾದಂಥ ನಮೂನೆಯಲ್ಲಿ ಅಂಥ ಪ್ರವೇಶ ಶುಲ್ಕದೊಡನೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ಸಿ) (i) ಮತ್ತು (ii) ನೇ ಖಂಡಗಳು ಮತ್ತು ಪರಂತುಕಗಳನ್ನು ಬಿಟ್ಟುಬಿಡತಕ್ಕದ್ದು.

(2) (1ಎ) ಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

(3) ಪರಂತುಕಗಳು ಒಳಗೊಂಡಂತೆ, (4) ಮತ್ತು (5) ನೇ ಉಪಪ್ರಕರಣಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(4) ಹದಿನೈದು ವರ್ಷಗಳ ವೃತ್ತಿಯನ್ನು ಪೂರ್ಣಗೊಳಿಸಿದ ಪ್ರತಿಯೊಬ್ಬ ಸದಸ್ಯನು ನಿಧಿಗೆ ಒಂದು ಸಾವಿರ ರೂಪಾಯಿಗಳ ಶುಲ್ಕವನ್ನು ಸಂದಾಯ ಮಾಡತಕ್ಕದ್ದು ಮತ್ತು ಹದಿನೈದು ವರ್ಷಗಳ ವೃತ್ತಿಯನ್ನು ಪೂರ್ಣಗೊಳಿಸಿರದ ಸದಸ್ಯನು, ಸದಸ್ಯನಾದ ವರ್ಷದ ತರುವಾಯ ಪ್ರತಿವರ್ಷ ಡಿಸೆಂಬರ್ ಮೂವತ್ತೊಂದನೇ ದಿನಾಂಕದಂದು ಅಥವಾ ಮೊದಲು ನಿಧಿಗೆ ಐದುನೂರು ರೂಪಾಯಿಗಳ ಶುಲ್ಕವನ್ನು ಸಂದಾಯ ಮಾಡತಕ್ಕದ್ದು, ಇದಕ್ಕೆ ತಪ್ಪಿದ್ದಲ್ಲಿ, ಈ ಅಧಿನಿಯಮದ ಉದ್ದೇಶಕ್ಕಾಗಿ ಆತನು ಸ್ವಇಚ್ಛೆಯಿಂದ ನ್ಯಾಯವಾದಿ ವೃತ್ತಿಯನ್ನು ನಿಲ್ಲಿಸಿರುವುದಾಗಿ ಭಾವಿಸತಕ್ಕದ್ದು:

ಪರಂತು, ಒಬ್ಬ ಸದಸ್ಯನು, ನಿಗದಿತ ದಿನಾಂಕವು ಮುಕ್ತಾಯವಾದ ತರುವಾಯ ಆರು ತಿಂಗಳೊಳಗಾಗಿ, ತಿಂಗಳೊಂದಕ್ಕೆ ಐವತ್ತು ರೂಪಾಯಿಗಳ ದಂಡದೊಡನೆ ಅಂಥ ಶುಲ್ಕವನ್ನು ಸಂದಾಯ ಮಾಡಬಹುದು, ಇಂಥ ಸಂದರ್ಭದಲ್ಲಿ ಸ್ವಇಚ್ಛೆಯಿಂದ ನ್ಯಾಯವಾದಿ ವೃತ್ತಿಯನ್ನು ನಿಲ್ಲಿಸಿರುವುದಾಗಿ ಅರ್ಥೈಸತಕ್ಕದ್ದಲ್ಲ;

ಮತ್ತು ಪರಂತು, ಹದಿನೈದು ವರ್ಷಗಳ ನ್ಯಾಯವಾದಿ ವೃತ್ತಿಯನ್ನು ಪೂರ್ಣಗೊಳಿಸಿದ ಸದಸ್ಯನು, ಪ್ರತಿ ವರ್ಷ ಶುಲ್ಕವನ್ನು ಸಂದಾಯ ಮಾಡುವುದಕ್ಕೆ ಬದಲಾಗಿ ಹದಿನೈದು ಸಾವಿರ ರೂಪಾಯಿಗಳನ್ನು ಒಂದೇ ಕಂತಿನಲ್ಲಿ ಸಂದಾಯ ಮಾಡಬಹುದು.

(5) (4)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ನಲವತ್ತು ವರ್ಷಗಳ ವಯಸ್ಸಾಗುವುದಕ್ಕೆ ಮೊದಲು, ಪಟ್ಟಿಯಲ್ಲಿ ಹೆಸರನ್ನು ಸೇರಿಸಿರುವ ಒಬ್ಬ ಸದಸ್ಯನು, ಎಪ್ಪತ್ತು ವರ್ಷಗಳ ವಯಸ್ಸಾದ ತರುವಾಯ (4)ನೇ ಉಪಪ್ರಕರಣದ ಅಡಿಯಲ್ಲಿ ಶುಲ್ಕವನ್ನು ಸಂದಾಯ ಮಾಡಲು ತಪ್ಪಿದ್ದಲ್ಲಿ, 16ನೇ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿಯ ಪ್ರಯೋಜನಗಳನ್ನು ಕ್ಲೇಮು ಮಾಡಲು ಅರ್ಹನಾಗತಕ್ಕದ್ದು, ಆದಾಗ್ಯೂ (4)ನೇ ಉಪಪ್ರಕರಣದ ಅಡಿಯಲ್ಲಿ ಬಾಕಿ ಇರುವ ಶುಲ್ಕದ ಬಾಕಿಗಳನ್ನು 16ನೇ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿ ಸಂದಾಯ ಮಾಡಬೇಕಾದ ಮೊಬಲಗಿನಿಂದ ಕಡಿತಗೊಳಿಸತಕ್ಕದ್ದು."

(4) (6)ನೇ ಉಪ ಪ್ರಕರಣದಲ್ಲಿ,–

(i) "ಮೂರು ಸಾವಿರ ರೂಪಾಯಿಗಳ" ಎಂಬ ಪದಗಳಿಗೆ "ಐದು ಸಾವಿರ ರೂಪಾಯಿಗಳ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ii) ಈ ಮುಂದಿನ ಪರಂತುಕವನ್ನು ಕೊನೆಯಲ್ಲಿ ಸೇರಿಸತಕ್ಕದ್ದು, ಎಂದರೆ,–

"ಪರಂತು, (4)ನೇ ಉಪಪ್ರಕರಣದ ಅಡಿಯಲ್ಲಿ ಭಾವಿತವೃತ್ತಿ ನಿಲ್ಲಿಸಿರುವಿಕೆಯು ನಿರಂತರವಾಗಿ ಐದು ವರ್ಷಗಳು ಮತ್ತು ಹೆಚ್ಚಿನ ಅವಧಿಯವರೆಗಿನದ್ದಾಗಿದ್ದಲ್ಲಿ 16ನೇ ಪ್ರಕರಣದ (1)ನೇ ಉಪ ಪ್ರಕರಣದ ಅಡಿಯಲ್ಲಿ ಸಂದಾಯ ಮಾಡಬೇಕಾದ ಮೊಬಲಗು ಒಂದು ಲಕ್ಷ ರೂಪಾಯಿಗಳನ್ನು ಮೀರತಕ್ಕದ್ದಲ್ಲ."

**7. 16ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 16ನೇ ಪ್ರಕರಣದಲ್ಲಿ,–

(1) ಪರಂತುಕವು ಒಳಗೊಂಡಂತೆ (1)ನೇ ಉಪಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) ವೃತ್ತಿಯು,

(i) ಸದಸ್ಯನ ಮರಣದ ಕಾರಣದಿಂದಾಗಿ ನಿಂತುಹೋಗಿದ್ದಲ್ಲಿ, ಆತನ ನಾಮ ನಿರ್ದೇಶಿತನು ಮತ್ತು ನಾಮ ನಿರ್ದೇಶಿತನಿಲ್ಲದಿದ್ದಲ್ಲಿ ಆತನ ಅವಲಂಬಿತರು ಅಥವಾ ಸಂದರ್ಭಾನುಸಾರ ವಾರಸುದಾರರು;

(ii) ಮರಣದ ಹೊರತಾಗಿ ಇತರ ಕಾರಣಗಳಿಂದಾಗಿ ನಿಂತುಹೋಗಿದ್ದಲ್ಲಿ ಸದಸ್ಯನು,

– ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಮೊಬಲಗನ್ನು ನಿಧಿಯಿಂದ ಸ್ವೀಕರಿಸಲು ಹಕ್ಕುಳ್ಳವನಾಗಿರತಕ್ಕದ್ದು:

ಪರಂತು, ಈ ಮುಂದಿನ ಪ್ರವರ್ಗಗಳ ಸದಸ್ಯರು, ಗರಿಷ್ಠ ಒಂದು ಲಕ್ಷ ಐವತ್ತು ಸಾವಿರ ರೂಪಾಯಿಗಳಿಗೊಳಪಟ್ಟು, ವೃತ್ತಿಯು ಪೂರ್ಣಗೊಂಡ ಪ್ರತಿಯೊಂದು ವರ್ಷಕ್ಕೆ ಐದು ಸಾವಿರ ರೂಪಾಯಿಗಳ ದರದಲ್ಲಿ ಮೊಬಲಗನ್ನು ಪಡೆಯಲು ಹಕ್ಕುಳ್ಳವರಾಗಿರತಕ್ಕದ್ದು, ಎಂದರೆ:–

(i) ಕರ್ನಾಟಕ ನ್ಯಾಯವಾದಿಗಳ ಕಲ್ಯಾಣ ನಿಧಿ (ತಿದ್ದುಪಡಿ) ಅಧಿನಿಯಮ, 2010ರ ಪ್ರಾರಂಭಕ್ಕೆ ಮೊದಲು ಸದಸ್ಯರಾದವರನ್ನು ಹೊರತುಪಡಿಸಿ, ನಲವತ್ತು ವರ್ಷ ವಯಸ್ಸಾದ ತರುವಾಯ ಸದಸ್ಯನಾಗುವ ಒಬ್ಬ ನ್ಯಾಯವಾದಿ;

(ii) ನಲವತ್ತು ವರ್ಷ ವಯಸ್ಸಾದ ತರುವಾಯ, ಹೆಸರುಗಳ ಪಟ್ಟಿಗೆ ಸೇರ್ಪಡೆಯಾದ ನ್ಯಾಯವಾದಿ;

(iii) ಯಾವುದೇ ಉದ್ಯೋಗ, ಉಪವೃತ್ತಿ ಅಥವಾ ವ್ಯವಹಾರದ ಉದ್ದೇಶಗಳಿಗಾಗಿ ಎರಡು ವರ್ಷಗಳಿಗೆ ಮೀರಿದ ಅವಧಿಯವರೆಗೆ ವೃತ್ತಿಯನ್ನು ಸ್ವ ಇಚ್ಛೆಯಿಂದ ನಿಲ್ಲಿಸಿದ್ದ ನ್ಯಾಯವಾದಿ;

(iv) ಸೇವೆಯಿಂದ ಅಥವಾ ಉದ್ಯೋಗದಿಂದ ನಿವೃತ್ತಿಯಾದ, ವಜಾಗೊಂಡ ಅಥವಾ ತೆಗೆದುಹಾಕಲಾದ ತರುವಾಯ ಹೆಸರುಗಳ ಪಟ್ಟಿಯಲ್ಲಿ ಸೇರ್ಪಡೆಯಾದ ನ್ಯಾಯವಾದಿ;

(v) 2000ದ ಆಗಸ್ಟ್ ಒಂದನೇ ದಿನದಂದು ಅಥವಾ ಆ ತರುವಾಯ ಸದಸ್ಯನಾಗಿರುವ ಮತ್ತು ಸದಸ್ಯನಾದ ದಿನಾಂಕದಂದು ಅರವತ್ತು ವರ್ಷ ವಯಸ್ಸಾದ ನ್ಯಾಯವಾದಿ;

(vi) ನಲವತ್ತು ವರ್ಷ ವಯಸ್ಸಾದ ತರುವಾಯ, ಇತರ ರಾಜ್ಯಗಳಿಂದ ವರ್ಗಾವಣೆಯಾಗಿ ಬಂದು ಸದಸ್ಯನಾಗಿರುವ ನ್ಯಾಯವಾದಿ:

ಮತ್ತು ಪರಂತು, 1997ರ ಏಪ್ರಿಲ್ ಎರಡನೇ ದಿನಾಂಕಕ್ಕೆ ಮೊದಲು ಸದಸ್ಯನಾಗಿದ್ದ ಮತ್ತು ಸಂದಾಯ ಮಾಡಬೇಕಾಗಿದ್ದ ಬಾಕಿ ಫೀಜನ್ನು ಸಂದಾಯ ಮಾಡಲು ತಪ್ಪಿರುವ ಮತ್ತು 1997ರ ಏಪ್ರಿಲ್ ಎರಡನೇ ದಿನಾಂಕದ ತರುವಾಯ, ನಿಧಿಗೆ ಪುನ: ಪ್ರವೇಶ ಪಡೆಯದಿರುವ ನ್ಯಾಯವಾದಿಯು, ವೃತ್ತಿಯನ್ನು ಪೂರ್ಣಗೊಳಿಸಿದ ಪ್ರತಿವರ್ಷಕ್ಕೆ ಮೂರು ಸಾವಿರ ರೂಪಾಯಿಗಳ ದರದಲ್ಲಿ, ಆದರೆ ಐವತ್ತು ಸಾವಿರ ರೂಪಾಯಿಗಳನ್ನು ಮೀರದ ಮೊಬಲಗಿಗೆ ಹಕ್ಕುಳ್ಳವನಾಗಿರತಕ್ಕದ್ದು ಮತ್ತು ಆತನು ವೃತ್ತಿ ನಡೆಸುವುದನ್ನು ನಿಲ್ಲಿಸಿದ ಮೇಲೆ ಈ ಮೊಬಲಗನ್ನು ಆತನಿಗೆ ಅಥವಾ ಆತನ ನಾಮನಿರ್ದೇಶಿತರಿಗೆ, ಮತ್ತು ಅವನ ನಾಮನಿರ್ದೇಶಿತರು ಯಾರೂ ಇಲ್ಲದಿರುವಲ್ಲಿ, ಅವನ ಅವಲಂಬಿತರಿಗೆ ಅಥವಾ ಸಂದರ್ಭಾನುಸಾರ ವಾರಸುದಾರರಿಗೆ ಸಂದಾಯಮಾಡತಕ್ಕದ್ದು."

(2) (2)ನೇ ಉಪ ಪ್ರಕರಣದಲ್ಲಿ, "ಸಮಾನ ಭಾಗವಾಗಿ" ಎಂಬ ಪದಗಳಿಗೆ "ಅಂಥ ಸದಸ್ಯನಿಗೆ ಅನ್ವಯವಾಗುವ ವಾರಸುದಾರಿಕೆ ಕಾನೂನಿನ ಅನುಸಾರವಾಗಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(3) ಪರಂತುಕವೂ ಒಳಗೊಂಡಂತೆ (4)ನೇ ಉಪ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(4) ಈ ಅಧಿನಿಯಮದ ಅಡಿಯಲ್ಲಿ ಸಂದಾಯ ಮಾಡುವ ಉದ್ದೇಶಕ್ಕಾಗಿ, ವೃತ್ತಿ ಪೂರ್ಣಗೊಂಡ ವರ್ಷಗಳ ಅವಧಿಯನ್ನು ಲೆಕ್ಕ ಹಾಕುವಾಗ,–

(i) ಮೂರು ತಿಂಗಳು ಅಥವಾ ಅದಕ್ಕೆ ಹೆಚ್ಚಿನ ಭಾಗವನ್ನು ಒಂದು ಪೂರ್ಣವರ್ಷವೆಂದು ಪರಿಗಣಿಸತಕ್ಕದ್ದು, ಮತ್ತು

(ii) ನ್ಯಾಯವಾದಿಗಳ ಅಧಿನಿಯಮ, 1961ರ (1961ರ ಕೇಂದ್ರ ಅಧಿನಿಯಮ ಸಂಖ್ಯೆ 25) 35ನೇ ಪ್ರಕರಣದ ಅಡಿಯಲ್ಲಿ ದುರ್ನಡತೆಯ ಪರಿಣಾಮವಾಗಿ ವೃತ್ತಿ ನಡೆಸುವುದನ್ನು ಅಮಾನತ್ತುಗೊಳಿಸಲಾದ ಅವಧಿಯನ್ನು ಹೊರತುಪಡಿಸತಕ್ಕದ್ದು.

(4ಎ) 1997ರ ಏಪ್ರಿಲ್ ಎರಡನೇ ದಿನಾಂಕಕ್ಕೆ ಮೊದಲು ಹೆಸರುಗಳ ಪಟ್ಟಿಯಲ್ಲಿ ಸೇರ್ಪಡೆಯಾಗಿದ್ದ ಮತ್ತು 2002ರ ಏಪ್ರಿಲ್ ಎರಡನೇ ದಿನಾಂಕದ ತರುವಾಯ ನಿಧಿಗೆ ಪ್ರವೇಶವನ್ನು ಪಡೆದಿರುವ ಒಬ್ಬ ನ್ಯಾಯವಾದಿಯ ಸಂದರ್ಭದಲ್ಲಿ, ಈ ಅಧಿನಿಯಮದ ಅಡಿಯಲ್ಲಿ ಸಂದಾಯದ ಉದ್ದೇಶಕ್ಕಾಗಿ ನಿಧಿಗೆ ಸದಸ್ಯನಾಗಿ ಪ್ರವೇಶ ಪಡೆಯುವುದಕ್ಕೆ ಮೊದಲು ವೃತ್ತಿ ನಡೆಸಿದ ಪ್ರತಿ ನಾಲ್ಕು ವರ್ಷಗಳನ್ನು, ವೃತ್ತಿ ಪೂರ್ಣಗೊಂಡ ಒಂದು ವರ್ಷವೆಂದು ಲೆಕ್ಕ ಹಾಕತಕ್ಕದ್ದು ಮತ್ತು ಅಂಥ ಪ್ರವೇಶದ ತರುವಾಯ ವೃತ್ತಿ ಪೂರ್ಣಗೊಂಡ ವರ್ಷಗಳ ಸಂಖ್ಯೆಗೆ ಅದನ್ನು ಸೇರಿಸತಕ್ಕದ್ದು."

(4) ಪರಂತುಕವೂ ಒಳಗೊಂಡಂತೆ (5)ನೇ ಉಪ ಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

(5) (7)ನೇ ಉಪ ಪ್ರಕರಣದ ತರುವಾಯ, ಈ ಮುಂದಿನ ಉಪ ಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ:–

"(8) (6)ನೇ ಉಪ ಪ್ರಕರಣದ ಅಡಿಯಲ್ಲಿ ಯಾವೊಬ್ಬ ಅರ್ಜಿದಾರನು ಕ್ಲೇಮು ಮಾಡಿದ್ದರೆ, ಅಂಥ ಕ್ಲೇಮಿನ ಆಧಾರದ ಮೇಲೆ ಸಂದಾಯ ಮಾಡಿದ ತರುವಾಯ, ಅಂಥ ಕ್ಲೇಮು ಸುಳ್ಳೆಂದು ಅಥವಾ ಸರಿಯಾದುದಲ್ಲವೆಂದು ಟ್ರಸ್ಟಿ ಸಮಿತಿಗೆ ಕಂಡುಬಂದರೆ, ಟ್ರಸ್ಟಿ ಸಮಿತಿಯು, ತಾನು ಸೂಕ್ತವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ ಮತ್ತು ಅಹವಾಲನ್ನು ಹೇಳಿಕೊಳ್ಳಲು ಅರ್ಜಿದಾರನಿಗೆ ಒಂದು ಅವಕಾಶವನ್ನು ನೀಡಿದ ತರುವಾಯ, ಅವನಿಗೆ ಸಲ್ಲಬೇಕಾದ ಮೊಬಲಗಿಗಿಂತ ಹೆಚ್ಚಾಗಿ ಸಂದಾಯ ಮಾಡಿರುವ ಮೊಬಲಗನ್ನು ಮರುಪಾವತಿ ಮಾಡುವಂತೆ ನಿರ್ದೇಶಿಸಬಹುದು ಮತ್ತು ಅದಕ್ಕೆ ತಪ್ಪಿದ ಸಂದರ್ಭದಲ್ಲಿ, ಅದನ್ನು ಭೂಕಂದಾಯದ ಬಾಕಿಯಂತೆ ವಸೂಲು ಮಾಡತಕ್ಕದ್ದು."

**8. 16ಎ ಮತ್ತು 16ಬಿ ಹೊಸಪ್ರಕರಣಗಳ ಸೇರ್ಪಡೆ.–** ಮೂಲ ಅಧಿನಿಯದ 16ನೇ ಪ್ರಕರಣದ ತರುವಾಯ, ಈ ಮುಂದಿನ ಪ್ರಕರಣಗಳನ್ನು ಸೇರಿಸತಕ್ಕದ್ದು, ಎಂದರೆ:–

"**16ಎ. ವೈದ್ಯಕೀಯ ಪರಿಹಾರ.–** (1) ನಿಯಮಿಸಬಹುದಾದಂಥ ಗಂಭೀರ ಕಾಯಿಲೆಯಿಂದ ನರಳುತ್ತಿರುವ ಯಾವೊಬ್ಬ ಸದಸ್ಯನು, ನಿಯಮಿಸಲಾದ ಕಾಯಿಲೆಯ ಸಂಬಂಧದಲ್ಲಿ ಚಿಕಿತ್ಸೆ ಪಡೆದುಕೊಂಡರೆ, ಅವನು ಚಿಕಿತ್ಸೆಗಾಗಿ ವಾಸ್ತಕವಾಗಿ ವೆಚ್ಚ ಮಾಡಿದ ಮೊಬಲಗನ್ನು ನಿಧಿಯಿಂದ ಸಂದಾಯ ಮಾಡುವುದಕ್ಕಾಗಿ ನಿಯಮಿಸಬಹುದಾದಂಥ ನಮೂನೆಯಲ್ಲಿ ಅಂಥ ದಸ್ತಾವೇಜುಗಳೊಡನೆ ಟ್ರಸ್ಟಿ ಸಮಿತಿಗೆ ಅರ್ಜಿಯನ್ನು ಸಲ್ಲಿಸಬಹುದು:

ಪರಂತು, ಈ ಪ್ರಕರಣದ ಅಡಿಯಲ್ಲಿ ಸಂದಾಯ ಮಾಡಬೇಕಾದ ಮೊಬಲಗು ಒಂದು ಲಕ್ಷ ರೂಪಾಯಿಗಳು ಅಥವಾ 16ನೇ ಪ್ರಕರಣದ ಅಡಿಯಲ್ಲಿ ಸಂದಾಯ ಮಾಡಬೇಕಾದ ಮೊಬಲಗಿನ ಶೇಕಡಾ ಐವತ್ತರಷ್ಟು – ಇವುಗಳಲ್ಲಿ ಯಾವುದು ಕಡಿಮೆಯೋ ಆ ಮೊಬಲಗನ್ನು ಮೀರತಕ್ಕದ್ದಲ್ಲ.

(2) ಚಿಕಿತ್ಸೆಯ ದಿನಾಂಕದಂದು ಸದಸ್ಯನು, ನಿಧಿಯ ಸದಸ್ಯನಾಗಿ ವೃತ್ತಿಯ ಐದು ವರ್ಷಗಳನ್ನು ಪೂರ್ಣಗೊಳಿಸಿರತಕ್ಕದ್ದು.

(3) ಆಸ್ಪತ್ರೆಗೆ ಸೇರಿದ ಪ್ರಾರಂಭದ ದಿನಾಂಕದಿಂದ ಮೂರು ತಿಂಗಳೊಳಗಾಗಿ ಅರ್ಜಿಯನ್ನು ಸಲ್ಲಿಸತಕ್ಕದ್ದು ಮತ್ತು ಅರ್ಜಿಯನ್ನು ಸಲ್ಲಿಸುವಲ್ಲಿ ವಿಳಂಬವಾದುದಕ್ಕೆ ಸದಸ್ಯನು ಸಾಕಷ್ಟು ಕಾರಣಗಳನ್ನು ತೋರಿಸಿದ ಮೇಲೆ, ಟ್ರಸ್ಟಿ ಸಮಿತಿಯು, ಮೂರು ತಿಂಗಳ ಹೆಚ್ಚಿನ ಅವಧಿಯವರೆಗೆ ಅದನ್ನು ವಿಸ್ತರಿಸಬಹುದು.

(4) ಈ ಪ್ರಕರಣದ ಅಡಿಯಲ್ಲಿ ನೀಡುವ ಸೌಲಭ್ಯವು, ಸದಸ್ಯನ ಜೀವಿತಾವಧಿಯಲ್ಲಿ ಒಮ್ಮೆ ಮಾತ್ರ ದೊರೆಯತಕ್ಕದ್ದು.

(5) ಈ ಪ್ರಕರಣದ ಅಡಿಯಲ್ಲಿ ಒಂದು ಹಣಕಾಸು ವರ್ಷದ ಅವಧಿಯಲ್ಲಿ ಸಂದಾಯ ಮಾಡುವುದಕ್ಕಾಗಿ ಪರಿಗಣಿಸಬಹುದಾದ ಅರ್ಜಿಗಳ ಒಟ್ಟು ಸಂಖ್ಯೆಯನ್ನು, ಟ್ರಸ್ಟಿ ಸಮಿತಿಯು, ತನ್ನ ಹಣಕಾಸಿನ ಪರಿಸ್ಥಿತಿ, ಭವಿಷ್ಯತ್ತಿನಲ್ಲಿ ನಿಧಿಯ ಸಾಧ್ಯತೆಗಳು, ಅರ್ಜಿದಾರ ಅವಶ್ಯಕತೆಗಳು ಮತ್ತು ಇತರ ಸಂಬಂಧಪಟ್ಟ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ನಿಗದಿಪಡಿಸತಕ್ಕದ್ದು.

(6) ಟ್ರಸ್ಟಿ ಸಮಿತಿಯು, ತಾನು ಸೂಕ್ತವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ, ಅರ್ಜಿಗೆ ಮಂಜೂರಾತಿ ನೀಡಬಹುದು ಅಥವಾ ಅದನ್ನು ತಿರಸ್ಕರಿಸಬಹುದು. ಅರ್ಜಿಯನ್ನು ದಾಖಲು ಮಾಡಿದ ದಿನಾಂಕಕ್ಕೆ ಅನುಸಾರವಾಗಿ ಕಟ್ಟುನಿಟ್ಟಾಗಿ ಅದನ್ನು ಪರಿಶೀಲಿಸತಕ್ಕದ್ದು.

(7) ಈ ಪ್ರಕರಣದಡಿಯಲ್ಲಿ ಸಂದಾಯ ಮಾಡಿದ ಮೊಬಲಗನ್ನು, 16ನೇ ಪ್ರಕರಣದ ಅಡಿಯಲ್ಲಿ ಅಂತಿಮ ಸಂದಾಯವನ್ನು ಮಾಡುವ ಸಮಯದಲ್ಲಿ ಕಡಿತಮಾಡಿಕೊಳ್ಳತಕ್ಕದ್ದು.

(8) ಅರ್ಜಿದಾರನು, ತನ್ನ ಖಾಯಿಲೆಗೆ ಸಂಬಂಧಪಟ್ಟಂತೆ, ಭಾರತದ ಬಾರ್ ಕೌನ್ಸಿಲ್‌ನ ನ್ಯಾಯವಾದಿಗಳ ಕಲ್ಯಾಣ ನಿಧಿ ಯೋಜನೆಯ ಅಡಿಯಲ್ಲಿ ಮೊಬಲಗನ್ನು ಸ್ವೀಕರಿಸಿದ್ದರೆ, ಟ್ರಸ್ಟಿ ಸಮಿತಿಯು, ಈ ಪ್ರಕರಣದ ಅಡಿಯಲ್ಲಿ ಮೊಬಲಗನ್ನು ಮಂಜೂರು ಮಾಡುವಾಗ, ಆ ಯೋಜನೆಯ ಅಡಿಯಲ್ಲಿ ಹಾಗೆ ಸ್ವೀಕರಿಸಿದ್ದ ಮೊಬಲಗನ್ನು ಕಡಿತಮಾಡಿಕೊಳ್ಳತಕ್ಕದ್ದು.

(9) ಅರ್ಜಿದಾರನು ಕ್ಲೇಮಿಗೆ ಬೆಂಬಲವಾಗಿ ನೀಡಿದ ತ:ಖ್ತೆಗಳು ಅಥವಾ ವಿವರಗಳು ಅಥವಾ ಹಾಜರುಪಡಿಸಿದ ದಸ್ತಾವೇಜುಗಳು, ಟ್ರಸ್ಟಿ ಸಮಿತಿಗೆ ಸುಳ್ಳೆಂದು ಕಂಡುಬಂದರೆ, ಅದು ಬಾರ್ ಕೌನ್ಸಿಲ್‌ಗೆ ಒಂದು ವರದಿಯನ್ನು ಸಲ್ಲಿಸತಕ್ಕದ್ದು ಮತ್ತು ಬಾರ್ ಕೌನ್ಸಿಲ್, ತಾನು ಸೂಕ್ತವೆಂದು ಭಾವಿಸುವಂಥ ವಿಚಾರಣೆಯನ್ನು ಮಾಡಿದ ತರುವಾಯ ಮತ್ತು ಅಹವಾಲನ್ನು ಹೇಳಿಕೊಳ್ಳಲು ಅರ್ಜಿದಾರನಿಗೆ ಒಂದು ಅವಕಾಶವನ್ನು ನೀಡಿದ ತರುವಾಯ, ಈ ಪ್ರಕರಣದ ಅಡಿಯಲ್ಲಿ ಸ್ವೀಕರಿಸಿದ್ದ ಇಡೀ ಮೊಬಲಗನ್ನು ವಾರ್ಷಿಕ ಶೇಕಡಾ ಹನ್ನೆರಡರ ದರದಲ್ಲಿ ಬಡ್ಡಿಯೊಂದಿಗೆ ಮರುಪಾವತಿ ಮಾಡುವಂತೆ ಅವನನ್ನು ಕೇಳತಕ್ಕದ್ದು. ಅರ್ಜಿದಾರನು, ಬಾರ್ ಕೌನ್ಸಿಲ್‌ನ ನಿರ್ದೇಶನವನ್ನು ಪಾಲಿಸಲು ತಪ್ಪಿದರೆ, ಈ ಪ್ರಕರಣದ ಅಡಿಯಲ್ಲಿ ಅವನು ಸ್ವೀಕರಿಸಿದ್ದ ಇಡೀ ಮೊಬಲಗನ್ನು ವಾರ್ಷಿಕ ಶೇಕಡಾ ಹನ್ನೆರಡರ ದರದ ಬಡ್ಡಿಯೊಂದಿಗೆ 16ನೇ ಪ್ರಕರಣದ ಅಡಿಯಲ್ಲಿ ಅಂತಿಮ ಸಂದಾಯವನ್ನು ಮಾಡುವಾಗ ಕಡಿತ ಮಾಡಿಕೊಳ್ಳತಕ್ಕದ್ದು.

**16ಬಿ. ಆರ್ಥಿಕ ಸಂಕಷ್ಟದ ಸಂದರ್ಭದಲ್ಲಿ ನಿಧಿಯಿಂದ ಭಾಗಶ: ಸಂದಾಯ.–** (1) ಎಪ್ಪತ್ತು ವರ್ಷ ವಯಸ್ಸು ತುಂಬಿರುವ ಮತ್ತು ನ್ಯಾಯವಾದಿಯಾಗಿ ಇಪ್ಪತ್ತು ವರ್ಷಗಳ ವೃತ್ತಿಯನ್ನು ಪೂರ್ಣಗೊಳಿಸಿರುವ ಮತ್ತು ನಿಧಿಯ ಸದಸ್ಯನಾಗಿ ಹನ್ನೆರಡು ವರ್ಷಗಳನ್ನು ಪೂರ್ಣಗೊಳಿಸಿರುವ ಒಬ್ಬ ಸದಸ್ಯನು, ಹಣಕಾಸಿನ ತೊಂದರೆಯನ್ನು ಎದುರಿಸುತ್ತಿದ್ದರೆ, ನಿಧಿಯಿಂದ ಭಾಗಶ: ಸಂದಾಯವನ್ನು ನೀಡುವಂತೆ ಕೋರಿ ಟ್ರಸ್ಟಿ ಸಮಿತಿಗೆ, ನಿಯಮಿಸಿದ ನಮೂನೆಯಲ್ಲಿ ಅರ್ಜಿ ಸಲ್ಲಿಸಬಹುದು. ಅಂಥ ಹಣಕಾಸಿನ ತೊಂದರೆಗೆ ಕಾರಣವಾದ ಸಂದರ್ಭವು ನಿಯಮಿಸಬಹುದಾದಂಥದ್ದು ಆಗಿರತಕ್ಕದ್ದು.

(2) ಟ್ರಸ್ಟಿ ಸಮಿತಿಗೆ ಅರ್ಜಿದಾರನ ಕ್ಲೇಮಿನ ಸಂಬಂಧದಲ್ಲಿ ಮನವರಿಕೆಯಾಗಿದ್ದರೆ, ಅದು, ಬಾರ್ ಕೌನ್ಸಿಲ್‌ನ ಪೂರ್ವಾನುಮೋದನೆಯೊಡನೆ 16ನೇ ಪ್ರಕರಣದ ಅಡಿಯಲ್ಲಿ ಅರ್ಜಿದಾರನು ಹಕ್ಕುಳ್ಳ ಶೇಕಡಾ ಐವತ್ತರಷ್ಟಕ್ಕೆ ಸಮನಾದ ಮೊಬಲಗನ್ನು ಅಥವಾ ಒಂದು ಲಕ್ಷ ರೂಪಾಯಿ, ಇವುಗಳಲ್ಲಿ ಯಾವುದು ಕಡಿಮೆಯೋ ಅದನ್ನು ಮಂಜೂರು ಮಾಡಬಹುದು.

(3) ಅರ್ಜಿಗಳನ್ನು ಅವುಗಳನ್ನು ದಾಖಲು ಮಾಡಿದ ದಿನಾಂಕಕ್ಕೆ ಅನುಸಾರವಾಗಿ ಕಟ್ಟುನಿಟ್ಟಾಗಿ ಪರಿಗಣಿಸತಕ್ಕದ್ದು.

(4) ಈ ಪ್ರಕರಣದ ಅಡಿಯಲ್ಲಿ ಸಂದಾಯ ಮಾಡಿದ ಮೊಬಲಗನ್ನು 16ನೇ ಪ್ರಕರಣದಡಿಯಲ್ಲಿ ಅಂತಿಮ ಸಂದಾಯ ಮಾಡುವ ಕಾಲದಲ್ಲಿ ಕಡಿತಮಾಡಿಕೊಳ್ಳತಕ್ಕದ್ದು.

(5) ಒಂದು ಆರ್ಥಿಕ ವರ್ಷದ ಅವಧಿಯಲ್ಲಿ ಈ ಪ್ರಕರಣದ ಅಡಿಯಲ್ಲಿ ಸಂದಾಯಕ್ಕಾಗಿ ಪರಿಗಣಿಸಬೇಕಾದ ಅರ್ಜಿಗಳ ಒಟ್ಟು ಸಂಖ್ಯೆಯನ್ನು, ಟ್ರಸ್ಟಿ ಸಮಿತಿಯು ತನ್ನ ಆರ್ಥಿಕ ಸ್ಥಿತಿಯನ್ನು, ಭವಿಷ್ಯತ್ತಿನಲ್ಲಿ ನಿಧಿಯ ಸಾಧ್ಯತೆಗಳನ್ನು ಮತ್ತು ಅರ್ಜಿದಾರನ ಅವಶ್ಯಕತೆಯನ್ನು ಹಾಗೂ ನಿಯಮಿಸಬಹುದಾದ ಇತರ ಸಂಬಂಧಪಟ್ಟ ಸಂಗತಿಗಳನ್ನು ಗಮನಿಸಿ ನಿಗದಿಪಡಿಸತಕ್ಕದ್ದು."

**9. 26ಎ ಪ್ರಕರಣವನ್ನು ಬಿಟ್ಟುಬಿಡುವುದು.–** ಮೂಲ ಅಧಿನಿಯಮದ 26ಎ ಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

**10. ಹೊಸ ಅನುಸೂಚಿಯ ಸೇರ್ಪಡೆ.–**ಮೂಲ ಅಧಿನಿಯಮದಲ್ಲಿ ಕೊನೆಯಲ್ಲಿ ಈ ಮುಂದಿನ ಅನುಸೂಚಿಯನ್ನು ಸೇರಿಸತಕ್ಕದ್ದು, ಎಂದರೆ:–

**"ಅನುಸೂಚಿ**

**[16ನೇ ಪ್ರಕರಣದ (1)ನೇ ಉಪಪ್ರಕರಣವನ್ನು ನೋಡಿ]**

| **ವೃತ್ತಿ ಪೂರ್ಣಗೊಂಡ ವರ್ಷಗಳು** | **ಹಕ್ಕು ಹೊಂದಿರುವಿಕೆ** |
|---|---|
| (1) ಹತ್ತು ವರ್ಷಗಳಿಗೆ ಮೀರದಿದ್ದರೆ | ಒಂದು ಲಕ್ಷ ಐವತ್ತು ಸಾವಿರ ರೂಪಾಯಿಗಳು |
| (2) ಹತ್ತು ವರ್ಷಗಳಿಗೆ ಮೀರಿದ್ದು ಆದರೆ ಇಪ್ಪತ್ತು ವರ್ಷಗಳು ಮೀರದಿದ್ದರೆ | ಎರಡು ಲಕ್ಷ ರೂಪಾಯಿಗಳು |
| (3) ಇಪ್ಪತ್ತು ವರ್ಷಗಳಿಗೆ ಮೀರಿದ್ದು ಆದರೆ ಮೂವತ್ತು ವರ್ಷಗಳು ಮೀರದಿದ್ದರೆ | ಎರಡು ಲಕ್ಷ ಐವತ್ತು ಸಾವಿರ ರೂಪಾಯಿಗಳು |
| (4) ಮೂವತ್ತು ವರ್ಷಗಳಿಗೆ ಮೀರಿದ್ದು ಆದರೆ ನಲವತ್ತು ವರ್ಷಗಳು ಮೀರದಿದ್ದರೆ | ಮೂರು ಲಕ್ಷ ಐವತ್ತು ಸಾವಿರ ರೂಪಾಯಿಗಳು |
| (5) ನಲವತ್ತು ವರ್ಷಗಳಿಗೆ ಮೀರಿದ್ದರೆ | ನಾಲ್ಕು ಲಕ್ಷ ರೂಪಾಯಿಗಳು" |

**11. ತಾತ್ಕಾಲಿಕ ಉಪಬಂಧ.–** ಈ ಅಧಿನಿಯಮದ ಮೂಲಕ ತಿದ್ದುಪಡಿಯಾದ ಮೂಲ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, 2005ರ ಜೂನ್ ಒಂದನೇ ದಿನಾಂಕದಂದು ಅಥವಾ ತರುವಾಯದ ಅವಧಿಯಲ್ಲಿ ಮತ್ತು ಕರ್ನಾಟಕ ನ್ಯಾಯವಾದಿಗಳ ಕಲ್ಯಾಣ ನಿಧಿ (ತಿದ್ದುಪಡಿ) ಅಧಿನಿಯಮ, 2010ರ ಪ್ರಾರಂಭಕ್ಕೆ ಮೊದಲು ನಿಧಿಯಿಂದ ಯಾವುದೇ ಮೊಬಲಗನ್ನು ಕ್ಲೇಮು ಮಾಡಿದಲ್ಲಿ, ಅಂಥ ಪ್ರಾರಂಭಕ್ಕೆ ಮೊದಲು ಜಾರಿಯಲ್ಲಿದ್ದ ಮೂಲ ಅಧಿನಿಯಮದ 15ನೇ ಪ್ರಕರಣದ (4)ನೇ ಉಪ ಪ್ರಕರಣದ ಅಡಿಯಲ್ಲಿ ಸದಸ್ಯನು, ಶುಲ್ಕಗಳನ್ನು ಸಂದಾಯ ಮಾಡಲು ತಪ್ಪಿರುವುದು ಅಂಥ ಪ್ರಾರಂಭದ ದಿನಾಂಕದಂದು ಬಾಕಿಯಾಗಿದ್ದರೆ, ಹಾಗೆ ತಪ್ಪಿದ ಪ್ರತಿಯೊಂದು ವರ್ಷಕ್ಕಾಗಿ ಮೂರು ಸಾವಿರ ರೂಪಾಯಿಗಳ ದರದಲ್ಲಿ ಮೊಬಲಗನ್ನು ಅಂಥ ಪ್ರಾರಂಭಕ್ಕೆ ಮೊದಲು ಜಾರಿಯಲ್ಲಿದ್ದ ಮೂಲ ಅಧಿನಿಯಮದ 16ನೇ ಪ್ರಕರಣದ (5)ನೇ ಉಪ ಪ್ರಕರಣದ ಅಡಿಯಲ್ಲಿ ಸಂದಾಯ ಮಾಡತಕ್ಕ ಮೊಬಲಗಿನಿಂದ ಕಡಿತ ಮಾಡತಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ನ್ಯಾಯವಾದಿಗಳ ನಿವೃತ್ತಿ ಸೌಲಭ್ಯಗಳನ್ನು 1.5 ಲಕ್ಷ ರೂಪಾಯಿಗಳಿಂದ ರೂ. 4.00 ಲಕ್ಷ ರೂಪಾಯಿಗಳಿಗೆ ಏರಿಸುವುದಕ್ಕೆ ಹಾಗೂ ನ್ಯಾಯವಾದಿಗಳಿಗೆ ವೈದ್ಯಕೀಯ ಪರಿಹಾರಕ್ಕಾಗಿ ಉಪಬಂಧವನ್ನು ಕಲ್ಪಿಸುವುದಕ್ಕೆ ಮತ್ತು ಇತರ ಕೆಲವು ತಿದ್ದುಪಡಿಗಳಿಗಾಗಿ ಕರ್ನಾಟಕ ನ್ಯಾಯವಾದಿಗಳ ಕಲ್ಯಾಣ ನಿಧಿ ಅಧಿನಿಯಮ, 1983ಕ್ಕೆ ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

2009–10ನೇ ವರ್ಷದಲ್ಲಿ, ಸರ್ಕಾರವು, ಕರ್ನಾಟಕ ನ್ಯಾಯವಾದಿಗಳ ಅಭಿವೃದ್ಧಿ ನಿಧಿಗೆ ರೂ. 100.00 ಲಕ್ಷಗಳನ್ನು ಒದಗಿಸಿದೆ. ಕರ್ನಾಟಕದ ಬಾರ್ ಕೌನ್ಸಿಲ್ ತನ್ನ ಸದಸ್ಯರುಗಳ ಕ್ಲೇಮುಗಳ ಸಂದಾಯಗಳನ್ನು ಮಾಡುವುದಕ್ಕಾಗಿ ಸದಸ್ಯತ್ವ ಶುಲ್ಕಗಳ ರೀತಿಯಲ್ಲಿ ತನ್ನದೇ ಆದ ನಿಧಿಗಳನ್ನು ಎತ್ತುತ್ತಿದೆ.

ಆದ್ದರಿಂದ ಈ ಹಂತದಲ್ಲಿ ಪ್ರಸ್ತಾವಿತ ಕ್ರಮದ ಮೇಲೆ ಯಾವುದೇ ಹಣಕಾಸಿವ ವೆಚ್ಚವಿರುವುದಿಲ್ಲ.

**ಎಸ್. ಸುರೇಶ್ ಕುಮಾರ್**
ನಗರಾಭಿವೃದ್ಧಿ, ಕಾನೂನು ಮತ್ತು ಸಂಸದೀಯ
ವ್ಯವಹಾರಗಳ ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

## ಅನುಬಂಧ

## ಕರ್ನಾಟಕ ನ್ಯಾಯವಾದಿಗಳ ಕಲ್ಯಾಣ ನಿಧಿ ಅಧಿನಿಯಮ, 1983
## (1985ರ ಕರ್ನಾಟಕ ಅಧಿನಿಯಮ 2)ರ ಉದ್ಧೃತ ಭಾಗ

xx xx xx

**2. ಪರಿಭಾಷೆಗಳು.–** (ಡಿ) xx xx xx

(iii) ಕಾರಣದಿಂದಾಗಿನ ಸ್ವಯಂ ನಿವೃತ್ತಿ

xx xx xx

(ಜಿಎ) 'ಕಾಯಂ ಅಸಮರ್ಥತೆ' ಎಂದರೆ ನ್ಯಾಯವಾದಿಯು ಎಂದಿನಂತೆ ವೃತ್ತಿಯನ್ನು ನಡೆಸುವುದರಿಂದ ಸಂಪೂರ್ಣವಾಗಿ ಅಸಮರ್ಥನಾಗಿರುವ ಅಸಮರ್ಥತೆ ಗೊತ್ತುಪಡಿಸಬಹುದಾದಂತೆ ಅಂಥ ಪ್ರಾಧಿಕಾರದಿಂದ ಹಾಗೆಂದು ಒಂದು ಪ್ರಮಾಣಪತ್ರವನ್ನು ಹಾಜರುಪಡಿಸತಕ್ಕದ್ದು.

xx xx xx

(ಜಿ) "ನೋಂದಾಯಿತ ಕಾರಾಕೂನ" ಎಂದರೆ ಭಾರತದ ಸಂವಿಧಾನದ 225ನೇ ಅನುಚ್ಛೇದ ಹಾಗೂ ರಾಜ್ಯ ಪುನರ್ ವಿಂಗಡಣಾ ಅಧಿನಿಯಮ, 1956ರ 54ನೇ ಪ್ರಕರಣ ಅಥವಾ ಸಿವಿಲ್ ಪ್ರಕ್ರಿಯಾ ಸಂಹಿತೆಯ 122ನೇ ಪ್ರಕರಣ ಅಥವಾ ಇತರೆ ಯಾವುದೇ ಕಾನೂನಿನಡಿಯಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದಿಂದ ಹೊರಡಿಸಲಾದ ಯಾವುದೇ ನಿಯಮಗಳೊಂದಿಗೆ ಸಂಬಂಧದಲ್ಲಿನ ನ್ಯಾಯವಾದಿ ಅಥವಾ ಪ್ಲೀಡರನ ನೋಂದಾಯಿತ ಕಾರಾಕೂನ ಅಥವಾ ಗುಮಾಸ್ತನೆಂದು ನೋಂದಣಿಯಾದಂಥ ವ್ಯಕ್ತಿ.

**4. ಟ್ರಸ್ಟಿ ಸಮಿತಿಯ ಸ್ಥಾಪನೆ.–** xx xx xx

(4) (3)ನೇ ಉಪ–ಪ್ರಕರಣದ (ಸಿ) ಖಂಡದ ಮೇರೆಗೆ ರಾಜ್ಯ ಸರ್ಕಾರದಿಂದ ನಾಮನಿರ್ದೇಶಿತನಾದ ಸದಸ್ಯನು ನಾಲ್ಕು ವರ್ಷಗಳ ಅವಧಿಗಾಗಿ ಪದವನ್ನು ಹೊಂದಿರತಕ್ಕದ್ದು.

(5) (3)ನೇ ಉಪ–ಪ್ರಕರಣದ (ಡಿ) ಖಂಡದ ಮೇರೆಗೆ ರಾಜ್ಯ ಸರ್ಕಾರದಿಂದ ನಾಮನಿರ್ದೇಶಿತನಾದ ಸದಸ್ಯನು ನಾಲ್ಕು ವರ್ಷಗಳ ಅವಧಿಗಾಗಿ ಪದವನ್ನು ಹೊಂದಿರತಕ್ಕದ್ದು.

xx xx xx

**9. ಟ್ರಸ್ಟೀ ಸಮಿತಿಯ ಪ್ರಕಾರ್ಯ .–** (1) xx xx

(2) xx xx xx

(ಇ) 16ನೇ ಪ್ರಕರಣಕ್ಕನುಸಾರವಾಗಿ ಮೊಬಲಗನ್ನು ಸದಸ್ಯರಿಗೆ ಸಂದಾಯ ಮಾಡುವುದು

**13. ಬಾರ್ ಅಸೋಸಿಯೇಷನ್‌ನ ಮಾನ್ಯತೆ ಮತ್ತು ನೋಂದಣಿ.–** (1) xx

(2) ಮಾನ್ಯತೆ ಮತ್ತು ನೋಂದಣಿಗಾಗಿನ ಪ್ರತಿಯೊಂದು ಅರ್ಜಿಯು ಸಂಘದ ನಿಯಮಗಳು ಅಥವಾ ಉಪವಿಧಿಗಳನ್ನು ಸಂಘದ ಪದಾಧಿಕಾರಿಗಳ ಹೆಸರುಗಳು ಮತ್ತು ವಿಳಾಸಗಳು ಹಾಗೂ ಪ್ರತಿಯೊಬ್ಬ ಸದಸ್ಯನ ಹೆಸರು, ವಿಳಾಸ, ನೋಂದಣಿಯಾದ ದಿನಾಂಕ ಮತ್ತು ವೃತ್ತಿಯನ್ನು ನಡೆಸುವ ಸಾಮಾನ್ಯ ಸ್ಥಳವನ್ನು ತೋರಿಸುವ ಸಂಘದ ಸದಸ್ಯರ ತಹಲ್‌ವರೆಗೆ ವ್ಯವಸ್ಥೆಗೊಳಿಸಿದ ಪಟ್ಟಿಯನ್ನು ಹೊಂದಿರತಕ್ಕದ್ದು.

xx xx xx

**15. ನಿಧಿಯ ಸದಸ್ಯತ್ವ** :– (1) ಕರ್ನಾಟಕ ರಾಜ್ಯದಲ್ಲಿ ವೃತ್ತಿ ನಡೆಸುತ್ತಿರುವ ಮತ್ತು ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್‌ನ ಪಟ್ಟಿಯಲ್ಲಿ ಹೆಸರನ್ನು ಹೊಂದಿರುವ ಪ್ರತಿಯೊಬ್ಬ ನ್ಯಾಯವಾದಿಯು ನಿಧಿಯ ಸದಸ್ಯನಾಗಿರತಕ್ಕದ್ದು ಹಾಗೂ ನಿಯಮಿಸಬಹುದಾದಂಥ ನಮೂನೆಯಲ್ಲಿ ಒಂದು ತಿಂಗಳೊಳಗೆ ಎರಡು ಸಾವಿರ ರೂಪಾಯಿಗಳ ಪ್ರವೇಶಶುಲ್ಕದೊಡನೆ ಘೋಷಣೆಯನ್ನು ಸಲ್ಲಿಸತಕ್ಕದ್ದು,

(i) ಕರ್ನಾಟಕ ನ್ಯಾಯವಾದಿಗಳ ಕಲ್ಯಾಣ ನಿಧಿ (ತಿದ್ದುಪಡಿ) ಅಧಿನಿಯಮ, 2004ರ (ಇದರಲ್ಲಿ ಇನ್ನು ಮುಂದೆ ತಿದ್ದುಪಡಿ ಅಧಿನಿಯಮ, 2004 ಎಂದು ಉಲ್ಲೇಖಿಸಲಾಗಿದೆ) ಪ್ರಾರಂಭದಂದು ಅಥವಾ ತರುವಾಯ ಹಾಗೆ ಪಟ್ಟಿಯಲ್ಲಿ ಹೆಸರನ್ನು ನೋಂದಣಿ ಮಾಡಿದಂಥ ನ್ಯಾಯವಾದಿಗಳ ಸಂದರ್ಭದಲ್ಲಿ ; ಅಥವಾ

(ii) ಈಗಾಗಲೇ ನೋಂದಣಿ ಮಾಡಲಾದ ನ್ಯಾಯವಾದಿಗಳ ಸಂದರ್ಭದಲ್ಲಿ ತಿದ್ದುಪಡಿ ಅಧಿನಿಯಮ, 2004 ಪ್ರಾರಂಭವಾದ ದಿನಾಂಕದಿಂದ ಒಂದು ತಿಂಗಳೊಳಗೆ ;

ಪರಂತು, ಈ ಉಪಬಂಧಗಳನ್ನು ನಿಧಿಯಲ್ಲಿ ಈಗಾಗಲೇ ಸದಸ್ಯರಾಗಿರುವಂಥ ನ್ಯಾಯವಾದಿಗಳಿಗೆ ಅನ್ವಯ ಮಾಡತಕ್ಕದ್ದಲ್ಲ.

ಪರಂತು, ಈಗಾಗಲೇ ಸದಸ್ಯರಾಗಿರುವ ನ್ಯಾಯವಾದಿಗಳನ್ನು ಬಿಟ್ಟು ಉಳಿದ ನ್ಯಾಯವಾದಿಗಳು ಕರ್ನಾಟಕ ನ್ಯಾಯವಾದಿಗಳ ಕಲ್ಯಾಣ ನಿಧಿ (ತಿದ್ದುಪಡಿ) ಅಧಿನಿಯಮ, 1993 ಜಾರಿಗೆ ಬಂದ ದಿನಾಂಕದಿಂದ ಆರು ತಿಂಗಳೊಳಗೆ ಒಂದು ಸಾವಿರ ರೂಪಾಯಿಗಳನ್ನು ಸಂದಾಯಮಾಡಿ ನಿಯಮಿಸಬಹುದಾದಂಥ ಘೋಷಣೆಗಳನ್ನು ಸಲ್ಲಿಸತಕ್ಕದ್ದು.

ಮತ್ತೂ ಪರಂತು, ಈಗಾಗಲೇ ಸದಸ್ಯರಾಗಿರುವ ನ್ಯಾಯವಾದಿಗಳು ಕರ್ನಾಟಕ ನ್ಯಾಯವಾದಿಗಳ ಕಲ್ಯಾಣ ನಿಧಿ (ತಿದ್ದುಪಡಿ) ಅಧಿನಿಯಮ, 1996 ಜಾರಿಗೆ ಬಂದ ದಿನಾಂಕದಿಂದ ಆರು ತಿಂಗಳೊಳಗೆ ಪ್ರವೇಶ ಶುಲ್ಕವೆಂಬುದಾಗಿ ಎಂಟುನೂರು ರೂಪಾಯಿಗಳ ಬಾಕಿ ಮೊಬಲಗನ್ನು ಸಂದಾಯ ಮಾಡತಕ್ಕದ್ದು.

(1ಎ) 15ನೇ ಪ್ರಕರಣದ (1)ನೇ ಉಪ–ಪ್ರಕರಣದ ಎರಡನೇ ಪರಂತುಕದಲ್ಲಿ ಉಲ್ಲೇಖಿಸಲಾದ ಪ್ರವೇಶ ಶುಲ್ಕದ ಬಾಕಿ ಸಂದಾಯ ಮಾಡಲು ವಿಫಲನಾದಲ್ಲಿ ಅಥವಾ (1)ನೇ ಉಪ–ಪ್ರಕರಣದಲ್ಲಿ ನಿರ್ದಿಷ್ಟ ಪಡಿಸಿದ ಸಮಯದೊಳಗೆ ಪ್ರವೇಶ ಶುಲ್ಕವನ್ನು ಸಂದಾಯ ಮಾಡಲು ವಿಫಲನಾದಲ್ಲಿ, 1997ರ ಏಪ್ರಿಲ್ ಎರಡನೇ ದಿನಾಂಕದಿಂದ ಅಥವಾ ಸಂದರ್ಭಾನುಸಾರ ತಿದ್ದುಪಡಿ ಅಧಿನಿಯಮ, 2004ರ ಪ್ರಾರಂಭದ ದಿನಾಂಕದಿಂದ ಒಂದು ತಿಂಗಳು ಅಥವಾ ಸಂದರ್ಭಾನುಸಾರ ಪಟ್ಟಿಯಲ್ಲಿ ಹೆಸರನ್ನು ಸೇರಿಸಿದ ದಿನಾಂಕದಿಂದ ಒಂದು ತಿಂಗಳು ಮುಕ್ತಾಯವಾದ ನಿಕಟ ತರುವಾಯ ಅಂಥ ಬಾಕಿ ಪ್ರವೇಶ ಶುಲ್ಕವನ್ನು ಅಥವಾ ಪ್ರವೇಶ ಶುಲ್ಕವನ್ನು ತಿಂಗಳಿಗೆ ಅಥವಾ ತಿಂಗಳ ಭಾಗಕ್ಕೆ ಐವತ್ತು ರೂಪಾಯಿಗಳ ವಿಳಂಬ ಶುಲ್ಕದೊಂದಿಗೆ ಸಂದಾಯ ಮಾಡಬಹುದು.

(4) ಪ್ರತಿಯೊಬ್ಬ ಸದಸ್ಯನು, ತಾನು ನಿಧಿಗೆ ಸದಸ್ಯನಾದ ದಿನಾಂಕದಿಂದ ಪ್ರತಿ ಐದು ವರ್ಷಗಳು ಪೂರ್ಣಗೊಂಡ ನಂತರದ ಮುಂದಿನ ಒಂದು ತಿಂಗಳೊಳಗೆ ಐದು ನೂರು ರೂಪಾಯಿಗಳ ಶುಲ್ಕವನ್ನು ಸಂದಾಯ ಮಾಡತಕ್ಕದ್ದು. ಇದಕ್ಕೆ ತಪ್ಪಿದಲ್ಲಿ, ಈ ಅಧಿನಿಯಮದ ಉದ್ದೇಶಕ್ಕಾಗಿ ತನ್ನ ನ್ಯಾಯವಾದಿ ವೃತ್ತಿಯನ್ನು ಸ್ವಯಿಚ್ಛೆಯಿಂದ ನಿಲ್ಲಿಸಿರುವುದಾಗಿ ಭಾವಿಸತಕ್ಕದ್ದು.

ಪರಂತು, ಆ ಸದಸ್ಯನು, ಮೇಲೆ ನಿರ್ದಿಷ್ಟಪಡಿಸಿದ ಅವಧಿಯು ಮುಕ್ತಾಯಗೊಂಡ ಮೂರು ತಿಂಗಳೊಳಗೆ ಆ ತಿಂಗಳಿನ ಐವತ್ತು ರೂಪಾಯಿಗಳ ದಂಡದೊಂದಿಗೆ ಶುಲ್ಕವನ್ನು ಸಂದಾಯ ಮಾಡಬಹುದು ಮತ್ತು ಆತ, ಅಂಥ ದಂಡದೊಂದಿಗೆ ಘೋಷಣೆಯನ್ನು ದಾಖಲಿಸಿದ್ದಲ್ಲಿ ಅದನ್ನು ಆತನು ವೃತ್ತಿ ನಿಲ್ಲಿಸಿರುವುದಾಗಿ ಭಾವಿಸುವಂತೆ ಅರ್ಥೈಸತಕ್ಕದ್ದಲ್ಲ ;

ಮತ್ತು ಪರಂತು, ತಿದ್ದುಪಡಿ ಅಧಿನಿಯಮ, 2004ರ ಪ್ರಾರಂಭದ ದಿನಾಂಕದಂದು ಒಬ್ಬ ಸದಸ್ಯನು, ತಾನು ಸದಸ್ಯನಾದ ತರುವಾಯ, ವೃತ್ತಿಯಲ್ಲಿ ಐದು ವರ್ಷಗಳನ್ನು ಪೂರ್ಣಗೊಳಿಸಿದ್ದರೆ, ಆತನು ಅಂಥ ಪ್ರಾರಂಭದ ದಿನಾಂಕದಿಂದ ಆರು ತಿಂಗಳೊಳಗೆ ಅಂಥ ಶುಲ್ಕವನ್ನು ಸಂದಾಯ ಮಾಡತಕ್ಕದ್ದು.

(5) ಒಬ್ಬ ಸದಸ್ಯನು (4)ನೇ ಉಪ–ಪ್ರಕರಣದಡಿಯಲ್ಲಿ ನೀಡಲಾದ ಸಮಯಗೊಳಗೆ ಶುಲ್ಕವನ್ನು ಸಂದಾಯ ಮಾಡುವುದಕ್ಕೆ ವಿಫಲನಾದಲ್ಲಿ, ಆತನು ಶುಲ್ಕವನ್ನು ಸಂದಾಯ ಮಾಡುವಂಥ ವರ್ಷವನ್ನೂ ಒಳಗೊಂಡಂತೆ ಆತನು ಶುಲ್ಕವನ್ನು ಸಂದಾಯಮಾಡುವವರೆಗಿನ ಪ್ರತಿ ವರ್ಷದ ಅವಧಿಯ ಈ ಅಧಿನಿಯಮದ ಉದ್ದೇಶಕ್ಕಾಗಿ ವೃತ್ತಿ ನಿಲ್ಲಿಸುವುದಾಗಿ ಭಾವಿಸಲಾದ ಅವಧಿ ಎಂಬಂತೆ ಪರಿಗಣಿಸತಕ್ಕದ್ದು.

(6) (4)ನೇ ಉಪ–ಪ್ರಕರಣದಡಿಯಲ್ಲಿ ವೃತ್ತಿ ನಿಲ್ಲಿಸಿರುವುದಾಗಿ ಭಾವಿಸಿದ ಪ್ರತೀ ವರ್ಷಕ್ಕಾಗಿ, ವಾರ್ಷಿಕ ಮೂರು ಸಾವಿರ ರೂಪಾಯಿಗಳ ಮೊಬಲಗನ್ನು 16ನೇ ಪ್ರಕರಣದ (1)ನೇ ಉಪ–ಪ್ರಕರಣದಡಿಯಲ್ಲಿ ಸಂದಾಯ ಮಾಡತಕ್ಕ ಮೊಬಲಗಿನಿಂದ ಕಳೆಯತಕ್ಕದ್ದು.

**16. ವೃತ್ತಿ ಸಮಾಪ್ತಿಯಾದ ಮೇಲೆ ನಿಧಿಯಿಂದ ಸಂದಾಯ .–** (1) ಸದಸ್ಯನು, ವೃದ್ಧಾಪ್ಯದಿಂದಾಗಿ ಸ್ವಯಿಚ್ಛಾ ನಿವೃತ್ತಿಯನ್ನು ಪಡೆದುದರಿಂದಾಗಿ, ವೃತ್ತಿಯು ಸಮಾಪ್ತಿಯಾದಾಗ ಒಂದು ಲಕ್ಷದ ಐವತ್ತು ಸಾವಿರ ರೂ.ಗಳ ಗರಿಷ್ಠ ಮಿತಿಗೆ ಒಳಪಟ್ಟು ನ್ಯಾಯವಾದಿಯು ವೃತ್ತಿಯ ಪ್ರತಿಯೊಂದು ಪೂರ್ಣಗೊಂಡ ವರ್ಷಕ್ಕೆ ಮೂರು ಸಾವಿರ ರೂಪಾಯಿಗಳ ಮೊಬಲಗನ್ನು ನಿಧಿಯಿಂದ ಸ್ವೀಕರಿಸಲು ಹಕ್ಕುಳ್ಳವನಾಗಿರತಕ್ಕದ್ದು.

ಪರಂತು, ಒಬ್ಬ ನ್ಯಾಯವಾದಿಯು 2000ದ ಆಗಸ್ಟ್ ಒಂದನೇ ದಿನಾಂಕದಂದು ಅಥವಾ ತರುವಾಯ ಸದಸ್ಯನಾಗಿದ್ದಲ್ಲಿ ಮತ್ತು ಅಂಥ ಪ್ರವೇಶದ ದಿನಾಂಕದಂದು ಅರವತ್ತು ವರ್ಷಗಳ ವಯಸ್ಸಾಗಿದ್ದಲ್ಲಿ, ಮುಂತಾದ ಹೊರತಾಗಿ ಇತರೆ ಯಾವುದೇ ಕಾರಣಕ್ಕೆ ವೃತ್ತಿಯನ್ನು ನಿಲ್ಲಿಸದ ಸಂದರ್ಭದಲ್ಲಿ ಸದಸ್ಯನಿಗೆ ಹಾಗೂ ಅವನ ಮರಣದಿಂದಾಗಿ ವೃತ್ತಿಯು ನಿಂತುಹೋದಲ್ಲಿ ಅವನ ನಾಮನಿರ್ದೇಶಿತನಿಗೆ ಅಥವಾ ನಾಮ ನಿರ್ದೇಶಿತನು ಇಲ್ಲದಿದ್ದಲ್ಲಿ, ಈತನ ಕಾನೂನು ಸಮ್ಮತ ವಾರಸುದಾರನಿಗೆ ಗರಿಷ್ಠ ಐವತ್ತು ಸಾವಿರ ರೂಪಾಯಿಗಳಿಗೆ ಒಳಪಟ್ಟು ವೃತ್ತಿನಡೆಸುವ ಪ್ರತೀ ಪೂರ್ಣಗೊಂಡ ವರ್ಷಕ್ಕೆ ಮೂರು ಸಾವಿರ ರೂಪಾಯಿಗಳ ದರದಲ್ಲಿ ಮೊಬಲಗನ್ನು ಸಂದಾಯ ಮಾಡತಕ್ಕದ್ದು:

ಮತ್ತು ಪರಂತು, ಒಬ್ಬ ನ್ಯಾಯವಾದಿಯು 1997ರ ಏಪ್ರಿಲ್ ಎರಡನೇ ದಿನಾಂಕಕ್ಕೂ ಮೊದಲು ಸದಸ್ಯನಾಗಿದ್ದಲ್ಲಿ, ಅವನು 15ನೇ ಪ್ರಕರಣದ (1)ನೇ ಉಪ–ಪ್ರಕರಣದ ಎರಡನೇ ಪರಂತುಕದ ಅಡಿಯಲ್ಲಿ ಅಗತ್ಯವಿರಬಹುದಾದಂತೆ ಬಾಕಿ ಪ್ರವೇಶ ಶುಲ್ಕವನ್ನು ಸಂದಾಯ ಮಾಡಿರದಿದ್ದಲ್ಲಿ ಮತ್ತು ಅಂಥ ದಿನಾಂಕದ ತರುವಾಯ ನಿಧಿಗೆ ಮರುಪ್ರವೇಶ ಪಡೆದಿರದಿದ್ದಲ್ಲಿ ಮರಣದ ಕಾರಣದ ಹೊರತಾಗಿ ಇತರೆ ಯಾವುದೇ ಕಾರಣಕ್ಕೆ ವೃತ್ತಿಯನ್ನು ನಿಲ್ಲಿಸಿದ ಸಂದರ್ಭದಲ್ಲಿ ಸದಸ್ಯನಿಗೆ ಮತ್ತು ಅವನ ಮರಣದಿಂದಾಗಿ ವೃತ್ತಿಯು ನಿಂತು ಹೋದಲ್ಲಿ ಅವನ ನಾಮನಿರ್ದೇಶಿತನಿಗೆ ಅಥವಾ ನಾಮನಿರ್ದೇಶಿತನು ಇಲ್ಲದಿದ್ದಲ್ಲಿ ಅವನ ಕಾನೂನು ಸಮ್ಮತ ವಾರಸುದಾರರಿಗೆ ವೃತ್ತಿಯ ಪ್ರತಿಯೊಂದು ಪೂರ್ಣಗೊಂಡ ವರ್ಷಕ್ಕಾಗಿ ಒಂದು ಸಾವಿರ ರೂಪಾಯಿಗಳ ದರದಂತೆ ಮೊಬಲಗನ್ನು ಸಂದಾಯ ಮಾಡತಕ್ಕದ್ದು.

(2) ಸದಸ್ಯನ ಮರಣದ ಸಂದರ್ಭದಲ್ಲಿ, ಮೊಬಲಗನ್ನು ಈತನ ನಾಮನಿರ್ದೇಶಿತನಿಗೆ ಅಥವಾ ನಾಮನಿರ್ದೇಶಿತ ನಿಲ್ಲದಿದ್ದಲ್ಲಿ, ಈತನ ಕಾನೂನು ಸಮ್ಮತ ಅವಲಂಭಿತರಿಗೆ ಅಥವಾ ವಾರಸುದಾರರಿಗೆ ಸಮಾನ ಭಾಗವಾಗಿ ಸಂದಾಯ ಮಾಡತಕ್ಕದ್ದು.

(4) ಈ ಅಧಿನಿಯಮದ ಮೇರೆಗೆ ಸಂದಾಯ ಮಾಡುವ ಉದ್ದೇಶಕ್ಕಾಗಿ ವೃತ್ತಿಯನ್ನು ಪೂರ್ಣಗೊಳಿಸಿದ ವರ್ಷಗಳ ಅವಧಿಯನ್ನು ಲೆಕ್ಕಹಾಕಲು ನಿಧಿಗೆ ಸದಸ್ಯನಾಗಿ ಪ್ರವೇಶ ಪಡೆಯುವುದಕ್ಕಿಂತ ಮೊದಲು, ನ್ಯಾಯವಾದಿ ವೃತ್ತಿಯಲ್ಲಿ ನಿರತನಾಗಿದ್ದರೆ ಅಂಥ ಪ್ರತಿ ನಾಲ್ಕು ವರ್ಷಗಳನ್ನು ವೃತ್ತಿಯ ಒಂದು ವರ್ಷದಂತೆ, ಗಣನೆ ಮಾಡತಕ್ಕದ್ದು ಮತ್ತು ಅಂಥ ಪ್ರವೇಶದ ನಂತರ ವೃತ್ತಿಯಲ್ಲಿ ನಿರತನಾಗಿದ್ದ ವರ್ಷಗಳ ಸಂಖ್ಯೆಗೆ ಅದನ್ನು ಸೇರಿಸತಕ್ಕದ್ದು :

ಪರಂತು, ಈ ಅಧಿನಿಯಮದ ಅಡಿಯಲ್ಲಿ ಮೊಬಲಗನ್ನು ಸಂದಾಯ ಮಾಡುವ ಉದ್ದೇಶಕ್ಕಾಗಿ ಪೂರ್ಣಗೊಂಡ ವರ್ಷಗಳನ್ನು ಲೆಕ್ಕ ಹಾಕುವಾಗ, ನೋಂದಾಯಿಸಿಕೊಳ್ಳುವುದಕ್ಕೆ ಮೊದಲು ಮೂರು ತಿಂಗಳು ಮತ್ತು ಅದಕ್ಕಿಂತ ಹೆಚ್ಚಿನ ಭಾಗವನ್ನು ಹಾಗೂ ನೋಂದಾಯಿತನಾದ ಮೇಲೆ ಆರು ತಿಂಗಳು ಮತ್ತು ಹೆಚ್ಚಿನ ಭಾಗವನ್ನು ಒಂದು ಪೂರ್ಣ ವರ್ಷವೆಂಬುದಾಗಿ ಪರಿಗಣಿಸತಕ್ಕದ್ದು.

ಮತ್ತು ಪರಂತು, ವೃತ್ತಿಯ ಪೂರ್ಣಗೊಂಡ ವರ್ಷಗಳ ಅವಧಿಯನ್ನು ಲೆಕ್ಕ ಹಾಕುವ ಉದ್ದೇಶಕ್ಕಾಗಿ ನ್ಯಾಯವಾದಿಗಳ ಅಧಿನಿಯಮ, 1961ರ (1961ರ ಕೇಂದ್ರ ಅಧಿನಿಯಮ 25) 35ನೇ ಪ್ರಕರಣದ ಅಡಿಯಲ್ಲಿ ದುರ್ನಡತೆಯ ಪರಿಣಾಮವಾಗಿ ವೃತ್ತಿ ನಡೆಸದಂತೆ ಅಮಾನತ್ತಿನಲ್ಲಿರಿಸಲಾಗಿದ್ದ ಅವಧಿಯನ್ನು ಹೊರತು ಪಡಿಸತಕ್ಕದ್ದು.

(5) ಶಾಶ್ವತ ಅಂಗವಿಕಲತೆಯಿಂದಾಗಿ ಸದಸ್ಯನ ವೃತ್ತಿಯು ಸಮಾಪ್ತಿಯಾದ ಸಂದರ್ಭದಲ್ಲಿ ಅವನಿಗೆ ಅಥವಾ ಅಂಥ ಸದಸ್ಯನು ಮೃತನಾದ ಸಂದರ್ಭದಲ್ಲಿ ಆತನ ನಾಮನಿರ್ದೇಶಿತನಿಗೆ ಅಥವಾ ಸಂದರ್ಭಾನುಸಾರ ನಾಮನಿರ್ದೇಶಿತರು ಯಾರೂ ಇಲ್ಲದಿದ್ದರೆ ಆತನ ಕಾನೂನು ಸಮ್ಮತ ವಾರಸುದಾರರಿಗೆ ಒಂದು ಲಕ್ಷ ಐವತ್ತು ಸಾವಿರ ರೂಪಾಯಿಗಳ ಮೊಬಲಗನ್ನು ಸಂದಾಯ ಮಾಡತಕ್ಕದ್ದು:

ಪರಂತು, ನೌಕರಿ, ಉಪವೃತ್ತಿ ಅಥವಾ ವ್ಯವಹಾರದ ಉದ್ದೇಶಕ್ಕಾಗಿ ಸ್ವಇಚ್ಛೆಯಿಂದ ವೃತ್ತಿ ನಿಲ್ಲಿಸಿದ್ದ ಮತ್ತು ಪುನಃ ವೃತ್ತಿಯಲ್ಲಿ ತೊಡಗಿದ ಅಥವಾ ನಿವೃತ್ತಿಯಿಂದಾಗಿ ಅಥವಾ ಸೇವೆಯಿಂದ ಅಥವಾ ಉದ್ಯೋಗದಿಂದ ತೆಗೆದುಹಾಕಿದ ಮೇಲೆ ನ್ಯಾಯವಾದಿಯಾಗಿ ಪಟ್ಟಿಗೆ ಸೇರಿಸಲಾದ ಅಥವಾ ನಲವತ್ತು ವರ್ಷಗಳ ವಯಸ್ಸಾದ ತರುವಾಯ ನ್ಯಾಯವಾದಿಯಾಗಿ ಪಟ್ಟಿಗೆ ಸೇರಿದ ಅಥವಾ ನಲವತ್ತು ವರ್ಷಗಳ ವಯಸ್ಸಾದ ತರುವಾಯ ಬೇರೆ ರಾಜ್ಯಗಳಿಂದ ವರ್ಗಾಯಿತನಾಗಿ ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್‌ನ ಪಟ್ಟಿಗೆ ಸೇರಿಸಲಾದ ಸದಸ್ಯನಿಗೆ ಇಡಿಗಂಟು ಮೊತ್ತವನ್ನು ಸಂದಾಯ ಮಾಡತಕ್ಕದ್ದಲ್ಲ. ಆದಾಗ್ಯೂ, ಅಂಥ ಸದಸ್ಯನಿಗೆ ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್‌ನ ಪಟ್ಟಿಯ ಮೇಲಿನ ಅವನು ವೃತ್ತಿಯಲ್ಲಿ ಪೂರ್ಣಗೊಳಿಸಿದ ಪ್ರತಿವರ್ಷಕ್ಕಾಗಿ ಎರಡು ಸಾವಿರ ರೂಪಾಯಿಗಳ ದರದಂತೆ ಮೊಬಲಗನ್ನು ನಿಧಿಯಿಂದ ಸಂದಾಯ ಮಾಡತಕ್ಕದ್ದು.

ಮತ್ತೂ ಪರಂತು, ಒಬ್ಬ ಸದಸ್ಯನು, ನಿಧಿಯ ಸದಸ್ಯತ್ವಕ್ಕೆ ಪ್ರವೇಶ ಪಡೆದ ದಿನಾಂಕದಿಂದ ಹತ್ತು ವರ್ಷಗಳ ಒಳಗೆ ಸ್ವಯಂ ನಿವೃತ್ತಿಯಿಂದಾಗಿ ತನ್ನ ವೃತ್ತಿಯನ್ನು ಸಮಾಪ್ತಿಗೊಳಿಸಿದ ಸಂದರ್ಭದಲ್ಲಿ ಈ ಅಧಿನಿಯಮದಡಿಯಲ್ಲಿ ಮೊಬಲಗನ್ನು ಕ್ಲೇಮು ಮಾಡಲು ಅರ್ಹನಾಗಿರತಕ್ಕದ್ದಲ್ಲ.

(7) (6)ನೇ ಉಪ-ಪ್ರಕರಣದಡಿಯಲ್ಲಿ ಸ್ವೀಕರಿಸಿದ ಅರ್ಜಿಯನ್ನು ಇದು ಅವಶ್ಯಕವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ ಟ್ರಸ್ಟಿ ಸಮಿತಿಯಿಂದ ವಿಲೆ ಮಾಡತಕ್ಕದ್ದು.

xx xx xx

**26ಎ. ನ್ಯಾಯವಾದಿಗಳ ಕುಟುಂಬ ಕಲ್ಯಾಣ ನಿಧಿ.–** (1) ಗೊತ್ತುಪಡಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು, ರಾಜ್ಯ ಸರ್ಕಾರವು ಮೃತರಾದ ನ್ಯಾಯವಾದಿಗಳ ನಾಮನಿರ್ದೇಶಿತರಿಗೆ ಅಥವಾ ಕಾನೂನು ಸಮ್ಮತ ವಾರಸುದಾರರಿಗೆ ಕುಟುಂಬ ಕಲ್ಯಾಣ ಸೌಲಭ್ಯಗಳ ಸಂದಾಯಕ್ಕೆ ಸಂಬಂಧಿಸಿದಂತೆ ಕರ್ನಾಟಕ ನ್ಯಾಯವಾದಿಗಳ ಕುಟುಂಬ ಕಲ್ಯಾಣ ನಿಧಿಯೆಂದು ಕರೆಯುವ ನಿಧಿಯನ್ನು ರಚಿಸತಕ್ಕದ್ದು.

(2) ನಿಧಿಯ ಸದಸ್ಯತ್ವಕ್ಕೆ ಸಂಬಂಧಿಸಿದ ವಂತಿಗೆಯು ಒಂದು ಸಾವಿರ ರೂಪಾಯಿಗಳ ಮೊತ್ತವಾಗಿರತಕ್ಕದ್ದು :

ಪರಂತು, ರಾಜ್ಯ ಸರ್ಕಾರವು ನಿಧಿಯ ಸದಸ್ಯತ್ವಕ್ಕೆ ಸಂಬಂಧಿಸಿದ ಪರಿಶಿಷ್ಟ ಜಾತಿಗಳು ಅಥವಾ ಪರಿಶಿಷ್ಟ ಪಂಗಡಗಳಿಗೆ ಸೇರಿದ ವ್ಯಕ್ತಿಗಳ ವಂತಿಗೆಗೆ ಸಂಬಂಧಿಸಿದಂತೆ ಕಡಿಮೆ ಮೊಬಲಗನ್ನು ಗೊತ್ತುಪಡಿಸಬಹುದು ;

(3) ನಿಧಿಗೆ,–

(ಎ) ನಿಧಿಯ ಸದಸ್ಯರು ನೀಡಿದ ವಂತಿಗೆಗಳು ;

(ಎಎ) ರಾಜ್ಯ ಸರ್ಕಾರದಿಂದ ಮಾಡಿದ ವಂತಿಗೆ ;

(ಬಿ) ಬಾರ್ ಕೌನ್ಸಿಲ್ ಆಫ್ ಇಂಡಿಯಾ, ಬಾರ್ ಕೌನ್ಸಿಲ್, ಯಾವುದೇ ಬಾರ್ ಅಸೋಸಿಯೇಷನ್, ಯಾವುದೇ ಅಸೋಸಿಯೇಷನ್ ಅಥವಾ ಪ್ರಾಧಿಕಾರ, ಸಂಸ್ಥೆ, ಯಾರೇ ನ್ಯಾಯವಾದಿ ಅಥವಾ ಯಾರೇ ಇತರೆ ವ್ಯಕ್ತಿ ಅಥವಾ ಸಂಸ್ಥೆಯಿಂದ ನಿಧಿಗೆ ನೀಡಲಾದ ಯಾವುದೇ ದೇಣಿಗೆ ಅಥವಾ ವಂತಿಗೆಗಳಿಗೆ ಜಮೆ ಮಾಡತಕ್ಕದ್ದು.

(4) ರಾಜ್ಯ ಸರ್ಕಾರವು ನಿಧಿಯ ಆಡಳಿತಕ್ಕಾಗಿ ಸಮಿತಿಯನ್ನು ರಚಿಸತಕ್ಕದ್ದು.

(5) ರಾಜ್ಯದಲ್ಲಿನ ಯಾವುದೇ ನ್ಯಾಯಾಲಯದಲ್ಲಿ ವೃತ್ತಿ ನಡೆಸಲಾದ ಮತ್ತು ಬಾರ್ ಅಸೋಸಿಯೇಷನ್ ಸದಸ್ಯನಾಗಿರುವ ಪ್ರತಿಯೊಬ್ಬ ನ್ಯಾಯವಾದಿಯು, ನಿರ್ದಿಷ್ಟಪಡಿಸಬಹುದಾದಂಥ ರೀತಿಯಲ್ಲಿ ನಿಧಿಯ ಸದಸ್ಯನಂತೆ ಪ್ರವೇಶ ಪಡೆಯಲು ನಿಧಿಯ ಆಡಳಿತಕ್ಕಾಗಿ ರಚಿತವಾದ ಸಮಿತಿಗೆ ಅರ್ಜಿ ಸಲ್ಲಿಸಬಹುದು.

(6) ನಿಧಿಯ ಸದಸ್ಯನಾಗಿರುವಂಥ ನ್ಯಾಯವಾದಿಯು ಮೃತನಾದಲ್ಲಿ, ಈತನ ನಾಮನಿರ್ದೇಶಿತ ಅಥವಾ ಸಂದರ್ಭಾನುಸಾರ, ಈತನ ಕಾನೂನುಬದ್ಧ ವಾರಸುದಾರರಿಗೆ, ನಿರ್ದಿಷ್ಟ ಪಡಿಸಬಹುದಾದಂತೆ ಒಂದು ಲಕ್ಷ ರೂಪಾಯಿಗಳನ್ನು ಮೀರದಂಥ ಮೊಬಲಗನ್ನು ಸಂದಾಯ ಮಾಡತಕ್ಕದ್ದು.

(7) ನಿಧಿಯಿಂದ ಮಾಡಲಾದ ಸಂದಾಯಗಳಿಗೆ ಒಳಪಟ್ಟು ನಿಧಿಯ ಸದಸ್ಯತ್ವ, ಆಡಳಿತ ಮತ್ತು ನಿಬಂಧನೆಗಳನ್ನು ಒಳಗೊಂಡ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ಗೊತ್ತುಪಡಿಸಬಹುದಾದಂಥ ರೀತಿಯಲ್ಲಿಯೇ ರೂಪಿಸತಕ್ಕದ್ದು.

**KARNATAKA LEGISLATIVE ASSEMBLY**
**THIRTEENTH LEGISLATIVE ASSEMBLY**
**SIXTH SESSION**

## THE KARNATAKA ADVOCATES' WELFARE FUND (AMENDMENT) BILL, 2010

**(L.A. Bill No. 18 of 2010)**

A Bill further to amend the Karnataka Advocates' Welfare Fund Act, 1983.

Whereas, it is expedient further to amend the Karnataka Advocates' Welfare Fund Act, 1983 (Karnataka Act 2 of 1985) for the purposes hereinafter appearing;

Be it enacted by the Karnataka State Legislature in the sixtyfirst year of the Republic of India as follows:-

**1. Short title and commencement.-** (1) This Act may be called the Karnataka Advocates' Welfare Fund (Amendment) Act, 2010.

(2) It shall come into force on such date as the State Government may, by notification, appoint, and different dates may be appointed for different provisions of this Act.

**2. Amendment of section 2.-** In the Karnataka Advocates' Welfare Fund Act, 1983 (Karnataka Act 2 of 1985) (hereinafter referred to as the principal Act) in section 2,-

(i) in clause (d), for sub-clause (iii), the following sub-clause shall be substituted, namely:-

"(iii) voluntary retirement on attaining an age of seventy five years or on completion of fifty years of practice whichever is earlier;"

(ii) for clause (ga), the following clause shall be substituted, namely:-

"(ga) permanent disability" means disability incurred by an advocate after becoming a member which renders him totally incapable from practicing as an advocate and certified as such by the District Surgeon of the District where the advocate is practicing;"

(3) after clause (j), the following clause shall be inserted, namely:-

"(jj) "schedule" means the schedule appended to this Act;"

**3. Amendment of section 4.-** In section 4 of the principal Act, in sub-sections (4) and (5), for the words "four years", the words "three years" shall be substituted.

**4. Amendment of section 9.-** In section 9 of the principal Act, in sub-section (2), in clause (e), for the words and figures "in accordance with section 16", the words " in accordance with this Act" shall be substituted.

**5. Amendment of section 13.-** In section 13 of the principal Act, in sub-section (2), for the words "rules or bye-laws of the association", the words, figures and brackets "rules or bye-laws of the association made by adopting model by-laws circulated by the Bar Council, and registered under the Karnataka Societies Registration Act, 1960 (Karnataka Act 17 of 1960)" shall be substituted.

**6. Amendment of section 15.-** (1) In section 15 of the principal Act,-

(1) in sub-section (1),-

(a) after the words "Every Advocate on the roll of the Karnataka State Bar Council" the words "and every person holding pleadership certificate" shall be inserted;

(b) for the words "in such form as may be prescribed along with an admission fee of rupees two thousand within one month" the words "in such form along with such admission fee as may be prescribed" shall be substituted.

(c) clauses (i) and (ii) and the provisos shall be omitted;

(2) sub-section (1A) shall be omitted;

(3) for sub-sections (4) and (5) including the provisos, the following shall be substituted, namely:-

"(4) Every member who has completed fifteen years of practice shall pay a fee of rupees one thousand to the fund and who has not completed fifteen years of practice shall pay a fee of rupees five hundred to the fund on or before the thirty first day of December of every year, next after the year of becoming member, failing which, he shall be deemed to have voluntarily suspended practice for the purpose of this Act:

Provided that a member may pay such fee within six months from the expiry of the due date along with a penalty of rupees fifty per month, in which case it shall not be construed as deemed voluntary suspension of practice:

Provided further that a member who has completed fifteen years of practice may, in lieu of payment of fee every year, pay in a lumpsum rupees fifteen thousand.

(5) Notwithstanding anything contained in sub-section (4), a member who is enrolled as an advocate before attaining an age of forty years, fails to pay fees under sub-section (4) after attaining an age of seventy years shall be eligible to claim benefit under sub-section (1) of sub-section 16, so however, arrears of fee due under sub-section (4) shall be deducted in the amount payable under sub-section (1) of sub-section 16."

(4) in sub-section (6),-

(i) for the words "rupees three thousand", the words "rupees five thousand" shall be substituted,

(ii) the following proviso shall be inserted, at the end, namely:-

"Provided that where a deemed suspension under sub-section (4) is consecutively for a period of five years and more, amount payable under sub-section (1) of section 16 shall not exceed one lakh rupees."

**7. Amendment of section 16.-** In section 16 of the principal Act,-

(1) for sub-section (1) including the provisos, the following shall be substituted, namely:-

"(1) Where the cessation of practice,-

(i) is due to death of a member, his nominee and if there is no nominee, to his dependents or heirs as the case may be; or

(ii) is due to reasons other than death, the member, shall be entitled to receive an amount specified in the schedule, from out of the fund:

Provided that the following categories of members shall be entitled to receive an amount at the rate of five thousand rupees for every completed year of practice subject to a maximum of rupees one lakh fifty thousand namely:-

(i) an advocate who becomes member after attaining an age of forty years except those who have become members prior to the commencement of the Karnataka Advocates' Welfare Fund (Amendment ) Act, 2010;

(ii) an advocate enrolled after attaining an age of forty years;

(iii) an advocate who has voluntarily suspended practice for a period exceeding two years for the purposes of any employment, avocation or business;

(iv) an advocate enrolled after retirement, dismissal or removal from service or employment;

(v) an advocate who has become member on or after the first day of August 2000 and has attained an age of sixty years on the date of becoming member;

(vi) an advocate who becomes member on transfer from other states, after attaining an age of forty years:

Provided further that an advocate who had become member prior to the second day of April, 1997 and has failed to pay balance fee due and has not been re-admitted to the fund after the second day of April, 1997, shall be entitled only to an amount at the rate of three thousand rupees for every completed year of practice but not exceeding an amount of rupees fifty thousand and this amount shall be paid to him or to his nominees, and where there are no nominees to his dependants or heirs as the case may be on cessation of practice."

(2) in sub-section (2), for the words "in equal share" the words "in accordance with the law of inheritance applicable to such member" shall be substituted.

(3) for sub-section (4) including the provisos, the following shall be substituted, namely:-

"(4) While calculating period of completed years of practice for the purpose of payment under this Act,-

(i) fraction of three months and more shall be treated as one full year; and

(ii) the period of suspension practice as a result of misconduct under section 35 of the Advocates Act, 1961 (Central Act 25 of 1961) shall be excluded.

(4A) In case of an advocate enrolled prior to the second day of April 1997 and admitted to the fund after the Second day of April 2002, every four years of practice before admission as a member to the fund shall be computed as one year of completed year of practice and added on to the number of completed years of practice after such admission for the purpose of payment under this Act."

(4) sub-section (5) including the proviso shall be omitted.

(5) after sub-section (7), the following sub-section shall be inserted, namely:-

"(8) If a claim made by any applicant under sub-section (6) is found to be false or incorrect by the trustee committee after making payment to him based on such claim, the trustee committee may, after holding such enquiry as it deems fit and after giving an opportunity of being heard to the applicant, direct him to refund the amount paid in excess of the amount due to him, and in case of default it shall be recoverable as an arrear of land revenue".

**8. Insertion of new sections 16 A and 16 B.-** After section 16 of the principal Act, the following sections shall be inserted, namely:-

**"16A. Medical relief.-** (1) If any member suffering from such serious ailment as may be prescribed undergoes treatment for the prescribed ailment, he may apply to the Trustee committee in such form along with such documents as may be prescribed for payment from the fund towards the amount actually incurred for the treatment:

Provided that, the amount payable under this section shall not exceed rupees one lakh or fifty percent of the amount payable under section 16, whichever is less.

(2) The member should have completed five years of practice as a member of the fund on the date of treatment.

(3) The application should be made within three months from the date of initial hospitalization and this may be extended by the trustee committee for a further period of three months on the member showing sufficient cause for delay in making the application.

(4) The benefit under this section shall be available only once in the life time of the member.

(5) Total number of applications which may be considered for payment under this section during a financial year shall be fixed by the trustee committee having regard to its financial position, feasibility of future operation of the fund, need of the applicant and other relevant factors.

(6) The trustee committee may after making such enquiry as it deems fit, either grant or reject the application. The application shall be considered strictly according to the date of their filing.

(7) The amount paid under this section shall be deducted at the time of making final payment under section 16.

(8) Where an applicant has received amount in respect of his ailment under the Bar Council of India Advocate's Welfare Fund Scheme, the trustee committee shall while granting amount under this section deduct the amount so received under that scheme.

(9) If any statements or particulars given by the applicant or documents produced in support of his claim are found to be false by the trustee committee, it shall make a report to the Bar council and the Bar council may after holding such enquiry as it deems fit and after giving an opportunity of being heard to the applicant call upon him to refund the entire amount received under this section along with an interest at the rate of twelve percent per annum. If the applicant fails to comply with the direction of the Bar council, the entire amount received under this section along with an interest at the rate of twelve percent per annum shall be deducted while making final payment under section 16.

**16B. Part payment from the fund during financial hardship.-** (1) A member who has attained the age of seventy years and has completed twenty years of practice as an advocate and twelve years as a member of the fund is facing a financial hardship may apply in a prescribed form to the trustee committee seeking part payment from the fund. The Situation leading to such financial hardship shall be such as may be prescribed.

(2) If the trustee committee is satisfied with the claim of the applicant it may, with the prior approval of the Bar Council, sanction an amount equivalent to fifty percent of entitlement of the applicant under section 16 or one lakh rupees whichever is less.

(3) The applications shall be considered strictly according to their dates of filing.

(4) The amount paid under this section shall be deducted at the time of making final payment under section 16.

(5) Total number of applications which may be considered for payment under this section during a financial year shall be fixed by the trustee committee having regard to its financial position, feasibility of future operation of the fund and need of the applicant and other relevant factors as may be prescribed."

**9. Omission of section 26A .-_** Section 26A of the principal Act shall be omitted.

**10. Insertion of new schedule.-** In the principal Act, the following schedule shall be inserted at the end, namely:-

**"Schedule**

(see sub-section (1) of section 16)

| **Completed years of practice** | **Entitlement** |
|---|---|
| (1) Not exceeding ten years | Rupees one lakh fifty thousand |
| (2) Exceeding ten years but not exceeding twenty years | Rupees two lakhs |
| (3) Exceeding twenty years but not exceeding thirty years | Rupees two lakhs fifty thousand |
| (4) Exceeding thirty years but not exceeding forty years | Rupees three lakhs fifty thousand |
| (5) Exceeding forty years | Rupees four lakhs |

"

**11.Transitional provision.-** Notwithstanding anything contained in the principal Act as amended by this Act where any claim for amount from the fund made during the period on or after the first day of June 2005 and before the commencement of the Karnataka Advocates' Welfare Fund (Amendment) Act, 2010, by a member who defaulted in payment of fees under sub-section (4) of section 15 of the principal Act as in force prior to such commencement, is pending on the date of such commencement, an amount at the rate of rupees three thousand for each year of the default shall be deducted in the amount payable under sub-section (5) of section 16 of the principal Act as in force prior to such commencement.

## STATEMENT OF OBJECTS AND REASONS

It is considered necessary to amend the Karnataka Advocates Welfare Fund Act, 1983 to enhance the retirement benefits of Advocates from Rs. 1.5 lakhs to Rs. 4.00 lakhs and to provide for medical relief to Advocates and certain other amendments.

Hence the Bill,

## FINANCIAL MEMORANDUM

In the year of 2009-10, the Government provided Rs. 100.00 lakhs to the Karnataka Advocate Welfare Fund. The Bar Council of Karnataka is raising its own funds by way of membership fees for making payments of claims of its members.

Hence at this stage there is no financial expenditure on the proposed measure.

**S. SURESH KUMAR**
Minister for Urban Development,
Law and Parliamentary Affairs

**S.B. PATIL**
Secretary
Karnataka Legislative Assembly

## ANNEXURE

**Extract from the Karnataka Advocates' Welfare Fund Act, 1983(Karnataka Act 2 of 1985)**

**xx** **xx** **xx**

**2. Definitions**.- (d) **xx** **xx** **xx**

(iii) voluntary retirement due to old age

**xx** **xx** **xx**

(ga) "permanent disability" means disability which renders an advocate totally incapable from practising as such. A certificate to that effect by such authority, as may be prescribed, shall be produced;

**xx** **xx** **xx**

(j) "registered clerk" means a person who is registered as a recognized clerk or gumasta of an advocate or a pleader in connection with any rules passed by the High Court of Karnataka under Article 225 of the Constitution of India and section 54 of the State Re-organization Act, 1956 or under section 122 of the Code of Civil Procedure or any other law.

**xx** **xx** **xx**

**4. Establishment of trustee committee.**- **xx** **xx**

(4) A member nominated by the State Government under clause (c) of sub-section (3), shall hold office for a term of four years.

(5) A member nominated by the Bar Council under clause (d) of sub-section (3), shall hold office for a term of four years or for the duration of his membership in the Bar Council, whichever is less

**xx** **xx** **xx**

**9. Function of trustee committee.- (2) xx** **xx**

(e) pay to the members amounts in accordance with section 16

**xx** **xx** **xx**

**13. Recognition and registration of bar associations.**- **xx**

(2) Every application for recognition and registration shall be accompanied by the rules or bye-laws of the association, names and addresses of the office bearers of the association and with an uptodate list of the members of the association showing the name, address, age, date of enrolment and the ordinary place of practice of each member.

**xx** **xx** **xx**

**15. Membership of the Fund.-** (1) Every Advocate on the roll of the Karnataka State Bar Council practicing in the State of Karnataka shall be a member of the Fund and shall file a declaration in such form as may be prescribed along with an admission fee of rupees two thousand within one month,-

(i) in case of an Advocate who is enrolled on or after the commencement of the Karnataka Advocates Welfare (Amendment) Act, 2004 (hereinafter referred to as Amendment Act 2004); or

(ii) within one month from the date of commencement of Amendment Act, 2004 in the case of Advocates already enrolled:

Provided that this provisions shall not apply to Advocates who are already members of the fund[1]

Provided that the advocates other than those who have already become Members, shall file such declarations as may be prescribed and pay 1[rupees one thousand]1 within six months from the date of coming into force of the Karnataka Advocates Welfare Fund (Amendment) Act, 1993.

Provided further that the Advocates who have already become members, shall pay the balance amount of rupees eight hundred towards admission fee within six months from the date of coming into force of the Karnataka Advocates Welfare Fund (Amendment) Act, 1996.

(1A) If any Advocate who has failed to pay the balance of the admission fee referred to in the second proviso to sub-section (1) or fails to pay the admission fee within the time specified in sub-section (1) of section 15, may pay such balance admission fee or as the case may be, the admission fee with a late fee of rupees fifty per month or part of a month from the Second day of April 1997 or next after the expiry of one month from the date of commencement of the Amendment Act, 2004 or one month from the date of enrollment, as the case may be.][1]

(4) Every member shall pay a fee of rupees five hundred within one month next after the completion of every five years from the date of his becoming member of the fund failing which he shall be deemed to have voluntarily suspended his practice for the purpose of this Act:

Provided that a member may pay such fee within three months from the expiry of the period specified above along with a penalty of fifty rupees per month and if he files such declaration along with the penalty it shall not be construed as deemed suspension:

Provided further that a member who on the date of commencement of the Amendment Act, 2004 has completed five years of practice after becoming a member shall pay such fee within six months from the date of such commencement.

(5) If a member fails to pay the fee within the time allowed under sub-section (4) the period of each year till he pays the fee including the year in which he pays the fee shall be treated as period of deemed suspension of practice for the purpose of this Act.

(6) For every year of deemed suspension under sub-section (4) an amount of rupees three thousand per annum shall be deducted from out of the amount payable under sub-section (1) of section 16.

**xx** **xx** **xx**

**16. Payment from the Fund on cessation of practice**.-(1) A member shall on cessation of practice arising out of voluntary retirement due to old age, be entitled to receive from out of the fund, an amount at the rate of [2][rupees three thousand][2] for every completed year of practice, subject to a maximum of [2][rupees one lakh fifty thousand.

1[Provided that where an Advocate has become member on or after the First day of August 2000 and has attained the age of sixty years on the date of such admission an amount at the rate of rupees three thousand for every completed year of practice subject to a maximum of rupees fifty thousand shall be payable to the member in the event of cessation of practice due to reason other than death and to his nominee or where there is no nominee to his legal heirs, if the cessation of practice is due to death:

Provided further that if an Advocate who had become member prior to the Second day of April, 1997 has not paid the balance admission fee as required under the second proviso to sub-section (1) of section 15 and has not been readmitted to the fund after such date, an amount at the rate of rupees one thousand for every completed year of practice, shall be paid to him on cessation of practice due to reason other than death and to his nominee or where there is no nominee, to his legal heirs, if the cessation of practice is due to death. ]1

(2) In the event of the death of a member, the amount shall be paid to his nominee or, where there is no nominee, to his legal dependents or heirs in equal share.

**xx** **xx** **xx**

(4) For calculating the period of completed years of practice for the purpose of payment under this Act, every four years of practice at the Bar, if any, before the admission of a member to the Fund shall be computed as one year of practice and added on to the number of years of practice after such admission.

Provided that while, calculating the period of completed years of practice for the purpose of payment under this Act, the fraction of three months and more before admission, and fraction of six months and more after admission shall be treated as one full year:

Provided further that the period of suspension of practice as a result of misconduct under section 35 of the Advocates Act, 1961 (Central Act 25 of 1961) shall be excluded for the purpose of calculation of the period of completed years of practice.]1

(5) A sum of [2][rupees one lakh and fifty thousand][2] shall be paid to the member on cessation of practice due to permanent disability 3[or in the event of death of a member, to his nominee or where there is no nominee, to his legal heirs, as the case may be.][3]

Provided that lumpsum amount shall not be paid to a member, who has voluntarily suspended and resumed practice for purposes of either employment, avocation or business, or who had been enrolled as an Advocate either on retirement or dismissal from service or employment or who enrolls as an advocate after the age of forty years, or who is transferred from other States to the roll of the Karnataka State Bar Council after the age of forty years, so however such member shall be paid from out of the fund an amount at the rate of rupees two thousand for every completed year of practice on the roll of the Karnataka State Bar Council.

Provided further that a Member shall not be eligible to claim amount under this Act on cessation of practice arising out of voluntary retirement within ten years from the date of admission to the Fund.][4]

**xx** **xx** **xx**

(7) An application received under sub-section (6), shall be disposed of by the trustee committee after such enquiry as it deems necessary.

**xx** **xx** **xx**

**26A. The Advocates Family Welfare Fund.**- (1) Subject to such rules as may be prescribed, the State Government shall constitute a Fund called the Karnataka Advocates' Family Welfare Fund, for payment of family welfare benefits to the nominees or legal heirs of the deceased advocates;

(2) The contribution for the membership of the fund shall be a sum of rupees one thousand:

Provided that the State Government may prescribe a lesser amount for contribution by persons belonging to Scheduled Castes or Scheduled Tribes for the membership of the fund;

(3) There shall be credited to the fund,--

(a) contributions made by the members of the fund;

1[(aa)contribution made by the State Government;]1

(b) any donation or contribution made to the fund by the Bar Council of India, Bar Council, any Bar Association, any Association or authority, institution, any Advocate or any other person or institution.

(4) The State Government shall constitute a Committee for the administration of the fund;

(5) Every advocate practising in any Court in the State and being a member of the Bar Association, may apply to the Committee constituted for the Administration of the fund for admission as a member of the fund, in such form as may be prescribed;

(6) Upon the death of an Advocate who is a member of the fund, his nominee or as the case may be, legal heirs shall be paid such sum not exceeding rupees one lakh as may be prescribed;

(7) All matters relating to the fund including its membership, administration and conditions subject to which payment from the fund shall be made, shall be as may be prescribed.

**xx** **xx** **xx**


## ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಶುಕ್ರವಾರ, ಜುಲೈ ೧೬, ೨೦೧೦ (ಆಷಾಢ ೨೫, ಶಕ ವರ್ಷ ೧೯೩೨) | ನಂ. ೮೨೪ |
|---|---|---|


**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/138/Bill/2010, Bangalore, Dated: 16th July, 2010**

The following Bill was introduced in Legislative Assembly on 16.7.2010.

**THE KARNATAKA APPROPRIATION (No. 2) BILL, 2010**

**(L.A. Bill No. 19 of 2010)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಆರನೇ ಅಧಿವೇಶನ**

**ಕರ್ನಾಟಕ ಧನವಿನಿಯೋಗ (ಸಂಖ್ಯೆ 2) ವಿಧೇಯಕ, 2010**
**(2010ರ ವಿಧಾನಸಭೆಯ ವಿಧೇಯಕ ಸಂಖ್ಯೆ 19)**

2010–2011ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಕೆಲವು ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡಲು ಒಂದು ವಿಧೇಯಕ.

2010–2011ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಆ ಪೈಕಿಯಿಂದ ಕೆಲವು ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡುವುದು ಯುಕ್ತವಾಗಿರುವುದರಿಂದ ;

ಇದು ಭಾರತ ಗಣರಾಜ್ಯದ ಅರವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮವಾಗಲಿ.

**1. ಸಂಕ್ಷಿಪ್ತ ಹೆಸರು :–** ಈ ಅಧಿನಿಯಮವನ್ನು ಕರ್ನಾಟಕ ಧನವಿನಿಯೋಗ (ಸಂಖ್ಯೆ 2) ಅಧಿನಿಯಮ, 2010 ಎಂದು ಕರೆಯತಕ್ಕದ್ದು.

**2. ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ 2010–2011ನೇ ಹಣಕಾಸು ವರ್ಷಕ್ಕಾಗಿ 7205921.32 ಲಕ್ಷ ರೂಪಾಯಿಗಳ ನೀಡಿಕೆ :–** ಅನುಸೂಚಿಯ 2ನೇ ಅಂಕಣದಲ್ಲಿ ನಿರ್ದಿಷ್ಟ ಪಡಿಸಲಾದ ಸೇವೆಗಳ ಸಂಬಂಧದಲ್ಲಿ 2010–2011ನೇ ಹಣಕಾಸು ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ (2010ರ ಕರ್ನಾಟಕ ಅಧಿನಿಯಮ ಸಂಖ್ಯೆ 3ರಲ್ಲಿ ಸಂದಾಯ ಮಾಡಲು ಅಧಿಕಾರ ನೀಡಲಾದ 2399571.80 ಲಕ್ಷ ರೂಪಾಯಿಗಳನ್ನು ಒಳಗೊಂಡಂತೆ) ಅನುಸೂಚಿಯ 5ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾಗಿರುವ ಎಪ್ಪತ್ತೆರಡು ಸಾವಿರದ ಐವತ್ತೊಂಭತ್ತು ಕೋಟಿ ಇಪ್ಪತ್ತೊಂದು ಲಕ್ಷದ ಮೂವತ್ತೆರಡು ಸಾವಿರ ರೂಪಾಯಿಗಳಿಗೆ ಮೀರದಷ್ಟು ಮೊಬಲಗನ್ನು ಮಾತ್ರ ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡತಕ್ಕದ್ದು.

**3. ಧನವಿನಿಯೋಗ :–** ಈ ಅಧಿನಿಯಮದ ಮೂಲಕ, ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡಲು ಮತ್ತು ಉಪಯೋಗಿಸಲು ಅಧಿಕಾರ ನೀಡಲಾದ ಮೊತ್ತಗಳನ್ನು ಸದರಿ ವರ್ಷಕ್ಕೆ ಸಂಬಂಧಪಟ್ಟಂತೆ ಅನುಸೂಚಿಯಲ್ಲಿ ತಿಳಿಸಲಾದ ಸೇವೆಗಳು ಮತ್ತು ಉದ್ದೇಶಗಳಿಗಾಗಿ ವಿನಿಯೋಗಿಸತಕ್ಕದ್ದು.

**ಅನುಸೂಚಿ**

(2 ಮತ್ತು 3ನೇ ಪ್ರಕರಣಗಳನ್ನು ನೋಡಿ)

(ರೂ. ಲಕ್ಷಗಳಲ್ಲಿ)

| | | | ಮೀರದ ಮೊಬಲಗು | | |
|---|---|---|---|---|---|
| **ಬೇಡಿಕೆ ಸಂಖ್ಯೆ** | **ಸೇವೆಗಳು ಮತ್ತು ಉದ್ದೇಶಗಳು** | | **ವಿಧಾನಸಭೆ ಯಿಂದ ಪುರಸ್ಕೃತ ವಾದುದನ್ನು** | **ಸಂಚಿತನಿಧಿ ಯಿಂದ ಪ್ರಭೃತ ವಾದುದನ್ನು** | **ಒಟ್ಟು** |
| **1** | **2** | | **3** | **4** | **5** |
| 01 | ಕೃಷಿ ಮತ್ತು ತೋಟಗಾರಿಕೆ | ರಾಜಸ್ವ | 206560.08 | 24.66 | 206584.74 |
| | | ಬಂಡವಾಳ | 7821.50 | - | 7821.50 |
| 02 | ಪಶು ಸಂಗೋಪನೆ ಮತ್ತು ಮೀನುಗಾರಿಕೆ | ರಾಜಸ್ವ | 79919.41 | - | 79919.41 |
| | | ಬಂಡವಾಳ | 8860.00 | - | 8860.00 |
| 03 | ಆರ್ಥಿಕ | ರಾಜಸ್ವ | 612806.96 | 15.00 | 612821.96 |
| | | ಬಂಡವಾಳ | 3507.00 | - | 3507.00 |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ | ರಾಜಸ್ವ | 31187.30 | 9485.38 | 40672.68 |
| | | ಬಂಡವಾಳ | - | - | - |
| 05 | ಒಳಾಡಳಿತ ಮತ್ತು ಸಾರಿಗೆ | ರಾಜಸ್ವ | 241566.94 | - | 241566.94 |
| | | ಬಂಡವಾಳ | 40631.50 | - | 40631.50 |
| 06 | ಮೂಲಭೂತ ಸೌಕರ್ಯ | ರಾಜಸ್ವ | 993.30 | - | 993.30 |
| | | ಬಂಡವಾಳ | 68033.00 | - | 68033.00 |
| 07 | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತಿ ರಾಜ್ | ರಾಜಸ್ವ | 209324.93 | - | 209324.93 |
| | | ಬಂಡವಾಳ | 146674.00 | - | 146674.00 |
| 08 | ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ | ರಾಜಸ್ವ | 55343.49 | 9014.04 | 64357.53 |
| | | ಬಂಡವಾಳ | 399.40 | - | 399.40 |
| 09 | ಸಹಕಾರ | ರಾಜಸ್ವ | 41589.06 | - | 41589.06 |
| | | ಬಂಡವಾಳ | 1339.86 | - | 1339.86 |
| 10 | ಸಮಾಜ ಕಲ್ಯಾಣ | ರಾಜಸ್ವ | 239173.15 | - | 239173.15 |
| | | ಬಂಡವಾಳ | 27918.35 | - | 27918.35 |

| | | | | | |
|---|---|---|---|---|---|
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ | ರಾಜಸ್ವ | 171500.07 | - | 171500.07 |
| | | ಬಂಡವಾಳ | 14985.00 | - | 14985.00 |
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವೆಗಳು | ರಾಜಸ್ವ | 22842.52 | - | 22842.52 |
| | | ಬಂಡವಾಳ | 13800.00 | - | 13800.00 |
| 13 | ಆಹಾರ ಮತ್ತು ನಾಗರೀಕ ಸರಬರಾಜು | ರಾಜಸ್ವ | 91716.67 | 2.70 | 91719.37 |
| | | ಬಂಡವಾಳ | 1800.00 | - | 1800.00 |
| 14 | ಕಂದಾಯ | ರಾಜಸ್ವ | 271790.24 | - | 271790.24 |
| | | ಬಂಡವಾಳ | 20724.80 | - | 20724.80 |
| 15 | ಮಾಹಿತಿ ತಂತ್ರಜ್ಞಾನ | ರಾಜಸ್ವ | 7775.10 | - | 7775.10 |
| | | ಬಂಡವಾಳ | 1525.00 | - | 1525.00 |
| 16 | ವಸತಿ | ರಾಜಸ್ವ | 87800.09 | - | 87800.09 |
| | | ಬಂಡವಾಳ | 12472.36 | - | 12472.36 |
| 17 | ಶಿಕ್ಷಣ | ರಾಜಸ್ವ | 1032989.23 | - | 1032989.23 |
| | | ಬಂಡವಾಳ | 27944.00 | - | 27944.00 |
| 18 | ವಾಣಿಜ್ಯ ಮತ್ತು ಕೈಗಾರಿಕೆ | ರಾಜಸ್ವ | 101624.37 | 0.26 | 101624.63 |
| | | ಬಂಡವಾಳ | 10532.25 | - | 10532.25 |
| 19 | ನಗರಾಭಿವೃದ್ಧಿ | ರಾಜಸ್ವ | 455138.89 | - | 455138.89 |
| | | ಬಂಡವಾಳ | 151050.00 | - | 151050.00 |
| 20 | ಲೋಕೋಪಯೋಗಿ | ರಾಜಸ್ವ | 131151.06 | - | 131151.06 |
| | | ಬಂಡವಾಳ | 205052.40 | - | 205052.40 |
| 21 | ಜಲಸಂಪನ್ಮೂಲ | ರಾಜಸ್ವ | 40003.26 | - | 40003.26 |
| | | ಬಂಡವಾಳ | 506029.64 | - | 506029.64 |
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | ರಾಜಸ್ವ | 227441.80 | - | 227441.80 |
| | | ಬಂಡವಾಳ | 40433.00 | - | 40433.00 |
| 23 | ಕಾರ್ಮಿಕ | ರಾಜಸ್ವ | 46109.50 | - | 46109.50 |
| | | ಬಂಡವಾಳ | 1500.00 | - | 1500.00 |
| 24 | ಇಂಧನ | ರಾಜಸ್ವ | 286475.78 | 213.00 | 286688.78 |
| | | ಬಂಡವಾಳ | 67967.00 | - | 67967.00 |

| | | | | | |
|---|---|---|---|---|---|
| 25 | ಕನ್ನಡ ಮತ್ತು ಸಂಸ್ಕೃತಿ | ರಾಜಸ್ವ | 20233.60 | - | 20233.60 |
| | | ಬಂಡವಾಳ | 2101.00 | - | 2101.00 |
| 26 | ಯೋಜನೆ, ಸಾಂಖ್ಯಿಕ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ | ರಾಜಸ್ವ | 6192.55 | - | 6192.55 |
| | | ಬಂಡವಾಳ | 24670.00 | - | 24670.00 |
| 27 | ಕಾನೂನು | ರಾಜಸ್ವ | 37487.46 | - | 37487.46 |
| | | ಬಂಡವಾಳ | 900.00 | - | 900.00 |
| 28 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ | ರಾಜಸ್ವ | 8715.53 | 153.88 | 8869.41 |
| | | ಬಂಡವಾಳ | - | - | - |
| 29 | ಋಣ ಮೇಲುಸ್ತುವಾರಿ | ರಾಜಸ್ವ | - | 631600.00 | 631600.00 |
| | | ಬಂಡವಾಳ | - | 381289.00 | 381289.00 |
| | **ಒಟ್ಟು** | | **6174123.40** | **1031797.92** | **7205921.32** |

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

2010–2011ನೇ ಹಣಕಾಸು ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ ರಾಜ್ಯದ ಸಂಚಿತ ನಿಧಿಯೊಳಗಿನಿಂದ ವಿನಿಯೋಗಿಸಲು ಭಾರತ ಸಂವಿಧಾನದ 204ನೇ ಅನುಚ್ಛೇದದ ಉಪಬಂಧಗಳಿಗನುಸಾರವಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

**ಬಿ.ಎಸ್. ಯಡಿಯೂರಪ್ಪ**
ಮುಖ್ಯಮಂತ್ರಿಗಳು ಹಾಗೂ
ಹಣಕಾಸು ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

**KARNATAKA LEGISLATIVE ASSEMBLY**
**THIRTEENTH LEGISLATIVE ASSEMBLY**
**SIXTH SESSION**

**THE KARNATAKA APPROPRIATION (No. 2) BILL, 2010**
**(L.A. Bill No. 19 of 2010)**

A Bill to authorize payment and appropriation of certain sums from and out of the Consolidated Fund of the State of Karnataka for the Services of the Financial Year 2010-2011.

Whereas it is expedient to authorize payment and appropriation of certain further sums from and out of the Consolidated Fund of the State for the services of the Financial Year 2010-2011.

Be it enacted by the Karnataka State Legislature in the Sixty First Year of the Republic of India as follows :-

**1. Short title :** This Act may be called the Karnataka Appropriation (No. 2) Act, 2010.

**2. Issue of Rupees 7205921.32 Lakhs out of the Consolidated Fund of the State of Karnataka for the Financial year 2010-2011.** From and out of the Consolidated Fund of the State of Karnataka, there may be paid and applied sums not exceeding those specified in column 5 of the Schedule amounting in the aggregate to the sum of **Rupees Seventy two thousand fifty nine crores twenty one lakhs thirty**

**two thousand only** (inclusive of the amount of Rupees 2399571.80 lakhs authorised to be paid in Karnataka Act No. 3 of 2010) towards defraying the several charges which will come in the course of payment during the Financial Year 2010-2011 in respect of the services specified in column 2 of the Schedule.

**3. Appropriation :-** The sums authorized to be paid and applied from and out of the Consolidated Fund of the State by this Act shall be appropriated for the services and purposes expressed in the Schedule in relation to the said year.

**SCHEDULE**

(See Sections 2 and 3)

(Rs. in Lakhs)

| Demand No. | Service & Purpose | | Sums not exceeding: Voted by the Legislative Assembly | Sums not exceeding: Charged on the Consoli dated Fund | Total |
|---|---|---|---|---|---|
| 1 | 2 | | 3 | 4 | 5 |
| 01 | Agriculture & Horticulture | Revenue | 206560.08 | 24.66 | 206584.74 |
| | | Capital | 7821.50 | - | 7821.50 |
| 02 | Animal Husbandry & Fisheries | Revenue | 79919.41 | - | 79919.41 |
| | | Capital | 8860.00 | - | 8860.00 |
| 03 | Finance | Revenue | 612806.96 | 15.00 | 612821.96 |
| | | Capital | 3507.00 | - | 3507.00 |
| 04 | Department of Personnel & Administrative Reforms | Revenue | 31187.30 | 9485.38 | 40672.68 |
| | | Capital | - | - | - |
| 05 | Home and Transport | Revenue | 241566.94 | - | 241566.94 |
| | | Capital | 40631.50 | - | 40631.50 |
| 06 | Infrastructure Development | Revenue | 993.30 | - | 993.30 |
| | | Capital | 68033.00 | - | 68033.00 |
| 07 | Rural Development & Panchayat Raj | Revenue | 209324.93 | - | 209324.93 |
| | | Capital | 146674.00 | - | 146674.00 |
| 08 | Forest, Ecology & Environment | Revenue | 55343.49 | 9014.04 | 64357.53 |
| | | Capital | 399.40 | - | 399.40 |
| 09 | Co-operation | Revenue | 41589.06 | - | 41589.06 |
| | | Capital | 1339.86 | - | 1339.86 |
| 10 | Social Welfare | Revenue | 239173.15 | - | 239173.15 |
| | | Capital | 27918.35 | - | 27918.35 |
| 11 | Women & Child Development | Revenue | 171500.07 | - | 171500.07 |
| | | Capital | 14985.00 | - | 14985.00 |
| 12 | Information, Tourism & Youth Services | Revenue | 22842.52 | - | 22842.52 |
| | | Capital | 13800.00 | - | 13800.00 |
| 13 | Food and Civil Supplies | Revenue | 91716.67 | 2.70 | 91719.37 |
| | | Capital | 1800.00 | - | 1800.00 |

| | | | | | |
|---|---|---|---|---|---|
| 14 | Revenue | Revenue | 271790.24 | - | 271790.24 |
| | | Capital | 20724.80 | - | 20724.80 |
| 15 | Information Technology | Revenue | 7775.10 | - | 7775.10 |
| | | Capital | 1525.00 | - | 1525.00 |
| 16 | Housing | Revenue | 87800.09 | - | 87800.09 |
| | | Capital | 12472.36 | - | 12472.36 |
| 17 | Education | Revenue | 1032989.23 | - | 1032989.23 |
| | | Capital | 27944.00 | - | 27944.00 |
| 18 | Commerce & Industries | Revenue | 101624.37 | 0.26 | 101624.63 |
| | | Capital | 10532.25 | - | 10532.25 |
| 19 | Urban Development | Revenue | 455138.89 | - | 455138.89 |
| | | Capital | 151050.00 | - | 151050.00 |
| 20 | Public Works | Revenue | 131151.06 | - | 131151.06 |
| | | Capital | 205052.40 | - | 205052.40 |
| 21 | Water Resources | Revenue | 40003.26 | - | 40003.26 |
| | | Capital | 506029.64 | - | 506029.64 |
| 22 | Health and Family Welfare | Revenue | 227441.80 | - | 227441.80 |
| | | Capital | 40433.00 | - | 40433.00 |
| 23 | Labour | Revenue | 46109.50 | - | 46109.50 |
| | | Capital | 1500.00 | - | 1500.00 |
| 24 | Energy | Revenue | 286475.78 | 213.00 | 286688.78 |
| | | Capital | 67967.00 | - | 67967.00 |
| 25 | Kannada and Culture | Revenue | 20233.60 | - | 20233.60 |
| | | Capital | 2101.00 | - | 2101.00 |
| 26 | Planning, Statistics, Science & Technology | Revenue | 6192.55 | - | 6192.55 |
| | | Capital | 24670.00 | - | 24670.00 |
| 27 | Law | Revenue | 37487.46 | - | 37487.46 |
| | | Capital | 900.00 | - | 900.00 |
| 28 | Parliamentary Affairs & Legislation | Revenue | 8715.53 | 153.88 | 8869.41 |
| | | Capital | - | - | - |
| 29 | Debt Servicing | Revenue | - | 631600.00 | 631600.00 |
| | | Capital | - | 381289.00 | 381289.00 |
| | **Total** | | **6174123.40** | **1031797.92** | **7205921.32** |

**STATEMENT OF OBJECTS AND REASONS**

This Bill is introduced in pursuance of the provisions of Article 204 of the Constitution of India to provide for the appropriation out of the Consolidated Fund of the State towards defraying the several charges which will come in course of payment during the Financial Year 2010-2011.

**B.S. YEDDYURAPPA**
Chief Minister and
Minister for Finance

**S.B. PATIL**
Secretary
Karnataka Legislative Assembly

**ವಿಶೇಷ ಪತ್ರಿಕೆ**

| ಭಾಗ – **IV-A** | ಬೆಂಗಳೂರು, ಶುಕ್ರವಾರ, ಜುಲೈ ೧೬, ೨೦೧೦ (ಆಷಾಢ ೨೫, ಶಕ ವರ್ಷ ೧೯೩೨) | ನಂ. ೮೨೫ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/145/Bill/2010, Bangalore, Dated: 16th July, 2010**

The following Bill was introduced in Legislative Assembly on 16.7.2010.

**THE KARNATAKA APPROPRIATION (No. 3) BILL, 2010**
**(L.A. Bill No. 20 of 2010)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಆರನೇ ಅಧಿವೇಶನ**

**ಕರ್ನಾಟಕ ಧನವಿನಿಯೋಗ (ಸಂಖ್ಯೆ 3) ವಿಧೇಯಕ, 2010**
**(2010ರ ವಿಧಾನಸಭೆಯ ವಿಧೇಯಕ ಸಂಖ್ಯೆ 20)**

2010–11ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಕೆಲವು ಅಧಿಕ ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡಲು ಒಂದು ವಿಧೇಯಕ.

2010–11ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಆ ಪೈಕಿಯಿಂದ ಕೆಲವು ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡುವುದು ಯುಕ್ತವಾಗಿರುವುದರಿಂದ ;

ಇದು ಭಾರತ ಗಣರಾಜ್ಯದ ಅರವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮಿತವಾಗಲಿ.

**1. ಸಂಕ್ಷಿಪ್ತ ಹೆಸರು :–** ಈ ಅಧಿನಿಯಮವನ್ನು ಕರ್ನಾಟಕ ಧನವಿನಿಯೋಗ (ಸಂಖ್ಯೆ 3) ಅಧಿನಿಯಮ, 2010 ಎಂದು ಕರೆಯತಕ್ಕದ್ದು.

**2. ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ 2010–11ನೇ ಹಣಕಾಸು ವರ್ಷಕ್ಕಾಗಿ 94140.19 ಲಕ್ಷ ರೂಪಾಯಿಗಳ ನೀಡಿಕೆ:–** ಅನುಸೂಚಿಯ 2ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾದ ಸೇವೆಗಳ ಸಂಬಂಧದಲ್ಲಿ 2010–11ನೇ ಹಣಕಾಸು ಅವಧಿಯಲ್ಲಿ ಸಂದಾಯ ಮಾಡುವಾಗ ಒದಗಿ ಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ ಅನುಸೂಚಿಯ 5ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾಗಿರುವ **ಒಂಬೈನೂರ ನಲವತ್ತೊಂದು ಕೋಟಿ ನಲವತ್ತು ಲಕ್ಷ ಹತ್ತೊಂಬತ್ತು ಸಾವಿರ ರೂಪಾಯಿಗಳು ಮಾತ್ರ** ಮೀರದಷ್ಟು ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡತಕ್ಕದ್ದು ಮತ್ತು ಉಪಯೋಗಿಸತಕ್ಕದ್ದು.

**3. ಧನವಿನಿಯೋಗ :–** ಈ ಅಧಿನಿಯಮದ ಮೂಲಕ, ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡಲು ಮತ್ತು ಉಪಯೋಗಿಸಲು ಅಧಿಕಾರ ನೀಡಲಾದ ಮೊತ್ತಗಳನ್ನು ಸದರಿ ವರ್ಷಕ್ಕೆ ಸಂಬಂಧಪಟ್ಟಂತೆ ಅನುಸೂಚಿಯಲ್ಲಿ ತಿಳಿಸಲಾದ ಸೇವೆಗಳು ಮತ್ತು ಉದ್ದೇಶಗಳಿಗಾಗಿ ವಿನಿಯೋಗಿಸತಕ್ಕದ್ದು.

**ಅನುಸೂಚಿ**

(2 ಮತ್ತು 3ನೇ ಪ್ರಕರಣಗಳನ್ನು ನೋಡಿ)

(ರೂ. ಲಕ್ಷಗಳಲ್ಲಿ)

| | | | ಮೀರದ ಮೊಬಲಗು | | |
|---|---|---|---|---|---|
| ಬೇಡಿಕೆ ಸಂಖ್ಯೆ | ಸೇವೆ ಮತ್ತು ಉದ್ದೇಶ | | ವಿಧಾನಸಭೆಯಿಂದ ಪುರಸ್ಕೃತವಾದುದು | ಸಂಚಿತನಿಧಿಯಿಂದ ಪ್ರಭೃತವಾದುದು | ಒಟ್ಟು |
| 1 | 2 | | 3 | 4 | 5 |
| 01 | ಕೃಷಿ ಮತ್ತು ತೋಟಗಾರಿಕೆ | ರಾಜಸ್ವ | 109.75 | – | 109.75 |
| 02 | ಪಶುಸಂಗೋಪನೆ ಮತ್ತು ಮೀನುಗಾರಿಕೆ | ರಾಜಸ್ವ | 976.00 | – | 976.00 |
| | | ಬಂಡವಾಳ | 1500.00 | – | 1500.00 |

| | | | | | |
|---|---|---|---|---|---|
| 03 | ಆರ್ಥಿಕ | ರಾಜಸ್ವ | 74.00 | – | 74.00 |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ | ರಾಜಸ್ವ | 1827.50 | 40.90 | 1868.40 |
| 05 | ಒಳಾಡಳಿತ ಮತ್ತು ಸಾರಿಗೆ | ರಾಜಸ್ವ | 1100.00 | – | 1100.00 |
| 07 | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ | ರಾಜಸ್ವ | 10687.62 | – | 10687.62 |
| | | ಬಂಡವಾಳ | 4073.20 | – | 4073.20 |
| 09 | ಸಹಕಾರ | ಬಂಡವಾಳ | 500.00 | – | 500.00 |
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ | ರಾಜಸ್ವ | 210.58 | – | 210.58 |
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವೆಗಳು | ರಾಜಸ್ವ | 432.20 | – | 432.20 |
| 13 | ಆಹಾರ ಮತ್ತು ನಾಗರೀಕ ಸರಬರಾಜು | ರಾಜಸ್ವ | 380.44 | – | 380.44 |
| 14 | ಕಂದಾಯ | ರಾಜಸ್ವ | 1106.27 | – | 1106.27 |
| 16 | ವಸತಿ | ರಾಜಸ್ವ | 567.91 | – | 567.91 |
| 17 | ಶಿಕ್ಷಣ | ರಾಜಸ್ವ | 3853.66 | – | 3853.66 |
| | | ಬಂಡವಾಳ | 431.68 | – | 431.68 |
| 18 | ವಾಣಿಜ್ಯ ಮತ್ತು ಕೈಗಾರಿಕೆ | ರಾಜಸ್ವ | 766.58 | – | 766.58 |
| | | ಬಂಡವಾಳ | 15506.51 | – | 15506.51 |
| 19 | ನಗರಾಭಿವೃದ್ಧಿ | ರಾಜಸ್ವ | 640.40 | – | 640.40 |
| | | ಬಂಡವಾಳ | 12604.00 | – | 12604.00 |
| 20 | ಲೋಕೋಪಯೋಗಿ | ಬಂಡವಾಳ | 10100.00 | – | 10100.00 |
| 21 | ಜಲಸಂಪನ್ಮೂಲ | ರಾಜಸ್ವ | 23.23 | – | 23.23 |
| | | ಬಂಡವಾಳ | 1262.00 | – | 1262.00 |
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | ರಾಜಸ್ವ | 380.50 | – | 380.50 |
| | | ಬಂಡವಾಳ | 400.00 | – | 400.00 |
| 23 | ಕಾರ್ಮಿಕ | ರಾಜಸ್ವ | 82.20 | – | 82.20 |
| 24 | ಇಂಧನ | ಬಂಡವಾಳ | 12644.00 | – | 12644.00 |
| 25 | ಕನ್ನಡ ಮತ್ತು ಸಂಸ್ಕೃತಿ | ರಾಜಸ್ವ | 125.00 | – | 125.00 |
| 26 | ಯೋಜನೆ, ಸಾಂಖ್ಯಿಕ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ | ರಾಜಸ್ವ | 1813.73 | – | 1813.73 |
| | | ಬಂಡವಾಳ | 9920.33 | – | 9920.33 |
| | **ಒಟ್ಟು :** | **ರಾಜಸ್ವ** | **25157.57** | **40.90** | **25198.47** |
| | | **ಬಂಡವಾಳ** | **68941.72** | **0.00** | **68941.72** |
| | | **ಒಟ್ಟು ಮೊತ್ತ :** | **94099.29** | **40.90** | **94140.19** |

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

2010–11ನೇ ಹಣಕಾಸು ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿ ಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ ರಾಜ್ಯದ ಸಂಚಿತ ನಿಧಿಯೊಳಗಿನಿಂದ ವಿನಿಯೋಗಿಸಲು ಭಾರತ ಸಂವಿಧಾನದ 205ನೇ (1)(ಎ) ಅನುಚ್ಛೇದದ ಉಪಬಂಧಗಳಿಗನುಸಾರವಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

**ಬಿ.ಎಸ್. ಯಡಿಯೂರಪ್ಪ**
ಮುಖ್ಯಮಂತ್ರಿಗಳು ಹಾಗೂ ಹಣಕಾಸು ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

**KARNATAKA LEGISLATIVE ASSEMBLY**
**THIRTEENTH LEGISLATIVE ASSEMBLY**
**SIXTH SESSION**

**THE KARNATAKA APPROPRIATION (No. 3) BILL, 2010**

**(L.A. Bill No. 20 of 2010)**

A Bill to authorise payment and appropriation of certain further sums from and out of the Consolidated Fund of the State for the services of the Financial Year 2010-11.

Whereas it is expedient to authorise payment and appropriation of certain further sums from and out of the Consolidated Fund of the State for the services for the Financial Year 2010-11.

Be it enacted by Karnataka State Legislature in the Sixty First Year of the Republic of India as follows :-

**1. Short title :** This Act may be called the Karnataka Appropriation Act, 2010.

**2. Issue of Rupees 94140.19 Lakhs out of the Consolidated Fund of the State for the Financial year 2010-11.** From and out of the Consolidated Fund of the State, there may be paid and applied sums not exceeding those specified in column 5 of the Scheduled amount in the aggregate to the sum of **Rupees Nine hundred and forty one crore forty lakhs and nineteen thousand only** towards defraying the several charges which will come in the course of payment during the financial year 2010-11 in respect of the services specified in Column 2 of the Schedule.

**3. Appropriation :-** The sums authorised to be paid and applied from and out of the Consolidated Fund of the State by this Act shall be appropriated for the services and purposes expressed in the Schedule in relation to the said year.

**SCHEDULE**
(See Sections 2 and 3)

(Rs. in Lakhs)

| | | | Sums not exceeding | | |
|---|---|---|---|---|---|
| Demand No. | Service & Purpose | | Voted by the Legislative Assembly | Charged on the Consoli dated Fund | Total |
| 1 | 2 | | 3 | 4 | 5 |
| 01 | Agriculture & Horticulture | Revenue | 109.75 | - | 109.75 |
| 02 | Animal Husbandry & Fisheries | Revenue | 976.00 | - | 976.00 |
| | | Capital | 1500.00 | - | 1500.00 |
| 03 | Finance | Revenue | 74.00 | - | 74.00 |
| 04 | Department of Personnel & Administrative Reforms | Revenue | 1827.50 | 40.90 | 1868.40 |

| | | | | | |
|---|---|---|---|---|---|
| 05 | Home and Transport | Revenue | 1100.00 | - | 1100.00 |
| 07 | Rural Development & | Revenue | 10687.62 | - | 10687.62 |
| | Panchayath Raj | Capital | 4073.20 | - | 4073.20 |
| 09 | Co-operation | Capital | 500.00 | - | 500.00 |
| 11 | Women & Child Development | Revenue | 210.58 | - | 210.58 |
| | | Capital | | - | |
| 12 | Information, Tourism & Youth Service | Revenue | 432.20 | - | 432.20 |
| 13 | Food and Civil Supplies | Revenue | 380.44 | - | 380.44 |
| 14 | Revenue | Revenue | 1106.27 | - | 1106.27 |
| 16 | Housing | Revenue | 567.91 | - | 567.91 |
| 17 | Education | Revenue | 3853.66 | - | 3853.66 |
| | | Capital | 431.68 | - | 431.68 |
| 18 | Commerce & Industries | Revenue | 766.58 | - | 766.58 |
| | | Capital | 15506.51 | - | 15506.51 |
| 19 | Urban Development | Revenue | 640.40 | - | 640.40 |
| | | Capital | 12604.00 | - | 12604.00 |
| 20 | Public Works | Capital | 10100.00 | - | 10100.00 |
| 21 | Water Resources | Revenue | 23.23 | - | 23.23 |
| | | Capital | 1262.00 | - | 1262.00 |
| 22 | Health and Family Welfare | Revenue | 380.50 | | 380.50 |
| | | Capital | 400.00 | | 400.00 |
| 23 | Labour | Revenue | 82.20 | | 82.20 |
| 24 | Energy | Capital | 12644.00 | | 12644.00 |
| 25 | Kannada and Culture | Revenue | 125.00 | | 125.00 |
| 26 | Planning, Statistics, Science & | Revenue | 1813.73 | | 1813.73 |
| | Technology | Capital | 9920.33 | | 9920.33 |
| | **Total :** | **Revenue** | **25157.57** | **40.90** | **25198.47** |
| | | **Capital** | **68941.72** | **0.00** | **68941.72** |
| | **Grand Total :** | | **94099.29** | **40.90** | **94140.19** |

## STATEMENT OF OBJECTS AND REASONS

This Bill is introduced in pursuance of the provisions of Article 205(1)(a) of the Constitution of India to provide for the appropriation out of the Consolidated Fund of the State towards defraying the several charges which will come in course of payment during the Financial Year 2010-11.

**B.S. YEDDYURAPPA**
Chief Minister and Minister for Finance

**S.B. PATIL**
Secretary
Karnataka Legislative Assembly

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ, ಜುಲೈ ೧೬, ೨೦೧೦ (ಆಷಾಢ ೨೫, ಶಕ ವರ್ಷ ೧೯೩೨) | ನಂ. ೮೨೬ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/146/Bill/2010, Bangalore, Dated: 16th July, 2010**

The following Bill was introduced in Legislative Assembly on 16.7.2010.

## THE KARNATAKA LAND REVENUE (AMENDMENT) BILL, 2010

**(L.A. Bill No. 22 of 2010)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಆರನೇ ಅಧಿವೇಶನ**

## ಕರ್ನಾಟಕ ಭೂ ಕಂದಾಯ (ತಿದ್ದುಪಡಿ) ವಿಧೇಯಕ, 2010

**(2010ರ ವಿಧಾನಸಭೆಯ ವಿಧೇಯಕ ಸಂಖ್ಯೆ 22)**

ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕಾಗಿ ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ನ್ನು (1964ರ ಕರ್ನಾಟಕ ಅಧಿನಿಯಮ 12) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು **ಕರ್ನಾಟಕ ಭೂ ಕಂದಾಯ (ತಿದ್ದುಪಡಿ) ಅಧಿನಿಯಮ, 2010** ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 2ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ 12) 2ನೇ ಪ್ರಕರಣದ (8)ನೇ ಉಪ–ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(8ಎ) "ಭೂಮಾಪನ, ಕಂದಾಯ ವ್ಯವಸ್ಥೆ ಮತ್ತು ಭೂ ದಾಖಲೆಗಳ ನಿರ್ದೇಶಕರು" ಎಂದರೆ ಮತ್ತು ಇದು "ಭೂಮಾಪನ, ಕಂದಾಯ ವ್ಯವಸ್ಥೆ ಮತ್ತು ಭೂ ದಾಖಲೆಗಳ ಆಯುಕ್ತರು ಅಥವಾ ಸಂದರ್ಭಾನುಸಾರ ಭೂಮಾಪನ, ಕಂದಾಯ ವ್ಯವಸ್ಥೆ ಮತ್ತು ಭೂ ದಾಖಲೆಗಳ ನಿರ್ದೇಶಕರು" ಎಂಬುದನ್ನು ಒಳಗೊಳ್ಳುತ್ತದೆ.

### ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಪುನರ್ ಪದನಾಮಾಂಕಿತ ಭೂಮಾಪನ, ಕಂದಾಯ ವ್ಯವಸ್ಥೆ ಮತ್ತು ಭೂ ದಾಖಲೆಗಳ ಆಯುಕ್ತರ ಹುದ್ದೆಯು ಒಳಗೊಳ್ಳುವಂತೆ ಭೂಮಾಪನ, ಕಂದಾಯ ವ್ಯವಸ್ಥೆ ಮತ್ತು ಭೂ ದಾಖಲೆಗಳ ನಿರ್ದೇಶಕರ ಪರಿಭಾಷೆಯನ್ನು ತಿದ್ದುಪಡಿ ಮಾಡುವುದಕ್ಕಾಗಿ ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ನ್ನು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮದಿಂದಾಗಿ ಯಾವುದೇ ಹೆಚ್ಚಿನ ವೆಚ್ಚವುಂಟಾಗುವುದಿಲ್ಲ.

**ಜಿ. ಕರುಣಾಕರರೆಡ್ಡಿ**
ಕಂದಾಯ ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

**KARNATAKA LEGISLATIVE ASSEMBLY**
**THIRTEENTH LEGISLATIVE ASSEMBLY**
**SIXTH SESSION**

**THE KARNATAKA LAND REVENUE (AMENDMENT) BILL, 2010**
**(L.A. Bill No. 22 of 2010)**

A Bill further to amend the Karnataka Land Revenue Act, 1964.

Whereas, it is expedient further to amend the Karnataka Land Revenue Act, 1964 (Karnataka Act 12 of 1964) for the purposes herein after appearing;

Be it enacted by the Karnataka State Legislature in the Sixty first year of Republic of India, as follows:-

**1. Short title and Commencement** ,- (1)This Act may be called the Karnataka Land Revenue (Amendment) Act, 2010

(2) It shall come into force at once.

**2. Amendment of section 2.-** In the Karnataka Land Revenue Act, 1964 (Karnataka Act 12 of 1964), in section 2, after sub-section (8), the following shall be inserted namely:-

**"(8a)"** Director of Survey Settlement of Land Records " means and includes the Commissioner of Survey Settlement of Land Records or the Director of Survey Settlement of Land records as the case may be."

**STATEMENT OF OBJECTS AND REASONS**

It is considered necessary to amend the Karnataka Land Revenue Act, 1964 to amend the definition of the Director of survey settlement and land records to include the redesignated post of the Commissioner of survey settlement and land records.

Hence the Bill.

**FINANCIAL MEMORANDUM**

There is no extra expenditure involved in the proposed measure.

**G.KARUNAKARA REDDY**
Minister for Revenue

**S.B. PATIL**
Secretary
Karnataka Legislative Assembly

**ವಿಶೇಷ ಪತ್ರಿಕೆ**

| ಭಾಗ – **IV-A** | ಬೆಂಗಳೂರು, ಶುಕ್ರವಾರ, ಜುಲೈ ೧೬, ೨೦೧೦ (ಆಷಾಢ ೨೫, ಶಕ ವರ್ಷ ೧೯೩೨) | ನಂ. ೮೨೭ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/147/Bill/2010, Bangalore, Dated: 16th July, 2010**

The following Bill was introduced in Legislative Assembly on 16.7.2010.

**THE KARNATAKA MUNICIPAL CORPORATIONS (AMENDMENT) BILL, 2010**
**(L.A. Bill No. 21 of 2010)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಆರನೇ ಅಧಿವೇಶನ**

**ಕರ್ನಾಟಕ ಪೌರನಿಗಮಗಳ (ತಿದ್ದುಪಡಿ) ವಿಧೇಯಕ, 2010**
**(2010ರ ವಿಧಾನಸಭೆಯ ವಿಧೇಯಕ ಸಂಖ್ಯೆ 21)**

ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976ನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕಾಗಿ ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ನ್ನು (1977ರ ಕರ್ನಾಟಕ ಅಧಿನಿಯಮ 14) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ ;

ಇದು ಭಾರತ ಗಣರಾಜ್ಯದ ಅರವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು **ಕರ್ನಾಟಕ ಪೌರನಿಗಮಗಳ (ತಿದ್ದುಪಡಿ) ಅಧಿನಿಯಮ, 2010** ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 11ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976 (1977ರ ಕರ್ನಾಟಕ ಅಧಿನಿಯಮ 14) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ). 11ನೇ ಪ್ರಕರಣದ (1ಎ) ಉಪಪ್ರಕರಣ ಮತ್ತು (2) ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು ಎಂದರೆ,–

"(1ಎ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗಾಗಿ ಈ ಮುಂದಿನ ಸ್ಥಾಯಿ ಸಮಿತಿಗಳು ಇರತಕ್ಕದ್ದು, ಎಂದರೆ,–

(ಎ) ತೆರಿಗೆ ಮತ್ತು ಹಣಕಾಸು ಸ್ಥಾಯೀ ಸಮಿತಿ.

(ಬಿ) ಸಾರ್ವಜನಿಕ ಆರೋಗ್ಯ ಸ್ಥಾಯೀ ಸಮಿತಿ.

(ಸಿ) ಪಟ್ಟಣ ಯೋಜನೆ ಮತ್ತು ಸುಧಾರಣಾ ಸ್ಥಾಯೀ ಸಮಿತಿ.

(ಡಿ) ಬೃಹತ್ ಲೋಕೋಪಯೋಗಿ ಕಾಮಗಾರಿ ಸ್ಥಾಯೀ ಸಮಿತಿ.

(ಇ) ವಾರ್ಡು ಮಟ್ಟದ ಲೋಕೋಪಯೋಗಿ ಕಾಮಗಾರಿ ಸ್ಥಾಯೀ ಸಮಿತಿ.

(ಎಫ್) ಲೆಕ್ಕ ಪತ್ರ ಸ್ಥಾಯೀ ಸಮಿತಿ.

(ಜಿ) ಶಿಕ್ಷಣ ಸ್ಥಾಯೀ ಸಮಿತಿ.

(ಎಚ್) ಸಾಮಾಜಿಕ ನ್ಯಾಯ ಸ್ಥಾಯೀ ಸಮಿತಿ.

(ಐ) ಅಪೀಲುಗಳ ಸ್ಥಾಯೀ ಸಮಿತಿ.

(ಜೆ) ತೋಟಗಾರಿಕೆ ಸ್ಥಾಯೀ ಸಮಿತಿ.

(ಕೆ) ಮಾರುಕಟ್ಟೆ ಸ್ಥಾಯೀ ಸಮಿತಿ.

(ಎಲ್) ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸ್ಥಾಯೀ ಸಮಿತಿ.

(2) ಪ್ರತಿಯೊಂದು ಸ್ಥಾಯೀ ಸಮಿತಿಯು, ಸಾರ್ವತ್ರಿಕ ಚುನಾವಣೆಯ ತರುವಾಯ ನಿಗಮದ ಮೊದಲನೇ ಸಭೆಯಲ್ಲಿ ಮತ್ತು ತದನಂತರದ ಪ್ರತಿಯೊಂದು ವರ್ಷದಲ್ಲಿ, ಅದೇ ತಿಂಗಳಿನ ಮೊದಲ ಸಭೆಯಲ್ಲಿ, ಏಕ ವರ್ಗಾವಣೀಯ ಮತದ ಮೂಲಕ ಪ್ರಮಾಣಾನುಸಾರ ಪ್ರಾತಿನಿಧ್ಯದ ತತ್ವಕ್ಕನುಸಾರವಾಗಿ ಈ ಮುಂದಿನಂತೆ, ಎಂದರೆ,–

(ಎ) ಬೃಹತ್ ಬೆಂಗಳೂರು ಮಹಾನಗರಪಾಲಿಕೆಯ ಹೊರತಾಗಿ, ಇತರ ನಿಗಮಗಳಿಗೆ, ನಿಗಮದ ಏಳು ಜನ ಕೌನ್ಸಿಲರುಗಳನ್ನು;

(ಬಿ) ಬೃಹತ್ ಬೆಂಗಳೂರು ಮಹಾನಗರಪಾಲಿಕೆಗಾಗಿ ಪಾಲಿಕೆಯ ಹದಿನೇಳು ಜನ ಕೌನ್ಸಿಲರುಗಳನ್ನು,

– ಒಳಗೊಂಡಿರತಕ್ಕದ್ದು:

ಪರಂತು, ಸಾರ್ವಜನಿಕ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಅಥವಾ ಸಂದರ್ಭಾನುಸಾರ ಸಾಮಾಜಿಕ ನ್ಯಾಯ ಸ್ಥಾಯೀ ಸಮಿತಿಗಳು ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳಿಗೆ ಸೇರಿದ ಇಬ್ಬರಿಗಿಂತ ಕಡಿಮೆಯಲ್ಲದ ಕೌನ್ಸಿಲರುಗಳನ್ನು ಒಳಗೊಂಡಿರತಕ್ಕದ್ದು."

**3. 61ಎ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 61ಎ ಪ್ರಕರಣದ (1)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) ಬೃಹತ್ ಬೆಂಗಳೂರು ಮಹಾನಗರಪಾಲಿಕೆಯ ಸ್ಥಾಯೀ ಸಮಿತಿಗಳು ಈ ಮುಂದಿನ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು, ಎಂದರೆ,–

(ಎ) ತೆರಿಗೆ ಮತ್ತು ಹಣಕಾಸು ಸ್ಥಾಯೀ ಸಮಿತಿಯು, ಹಣಕಾಸು ಮತ್ತು ತೆರಿಗೆಗೆ ಸಂಬಂಧಪಟ್ಟ ಎಲ್ಲಾ ವಿಷಯಗಳನ್ನು ಮತ್ತು ಯಾವುದೇ ಇತರ ಸ್ಥಾಯೀ ಸಮಿತಿಗೆ ನಿರ್ದಿಷ್ಟವಾಗಿ ವಹಿಸಿಕೊಡದಿರುವ ಎಲ್ಲಾ ವಿಷಯಗಳನ್ನು ವ್ಯವಹರಿಸತಕ್ಕದ್ದು;

(ಬಿ) ಸಾರ್ವಜನಿಕ ಆರೋಗ್ಯ ಸ್ಥಾಯೀ ಸಮಿತಿಯು, ಸಾರ್ವಜನಿಕ ಆರೋಗ್ಯಕ್ಕೆ ಸಂಬಂಧಪಟ್ಟ ಎಲ್ಲಾ ವಿಷಯಗಳನ್ನು ನಿರ್ವಹಿಸತಕ್ಕದ್ದು;

(ಸಿ) ಪಟ್ಟಣ ಯೋಜನೆ ಮತ್ತು ಸುಧಾರಣೆ ಸ್ಥಾಯೀ ಸಮಿತಿಯು ಪಟ್ಟಣ ಯೋಜನೆ ಮತ್ತು ಸುಧಾರಣೆಗೆ ಸಂಬಂಧಪಟ್ಟ ಎಲ್ಲಾ ವಿಷಯಗಳನ್ನು ನಿರ್ವಹಿಸತಕ್ಕದ್ದು;

(ಡಿ) ಬೃಹತ್ ಲೋಕೋಪಯೋಗಿ ಕಾಮಗಾರಿ ಸ್ಥಾಯೀ ಸಮಿತಿಯು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಅಧಿಕಾರ ವ್ಯಾಪ್ತಿಯಲ್ಲಿ ಬರುವ ಮೇಲು ಸೇತುವೆಗಳು, ಕೆಳ ಸೇತುವೆಗಳು, ಸುರಂಗ ಮಾರ್ಗಗಳು, ರಸ್ತೆಯ ಅಗಲೀಕರಣ, ವರ್ತುಲ ರಸ್ತೆಗಳು, ಎತ್ತರಿಸಿದ ರಸ್ತೆಗಳು ಇಂಥ ಬೃಹತ್ ಕಾಮಗಾರಿಗಳು ಹಾಗೂ ಭೂ ಸ್ವಾಧೀನವು ಒಳಗೊಂಡಂತೆ ಅದಕ್ಕೆ ಪ್ರಾಸಂಗಿಕವಾದ ಎಲ್ಲಾ ಇತರ ಕಾರ್ಯಗಳನ್ನು ನಿರ್ವಹಿಸತಕ್ಕದ್ದು;

(ಇ) ವಾರ್ಡು ಮಟ್ಟದ ಸ್ಥಾಯೀ ಸಮಿತಿಯು ಸಾರ್ವಜನಿಕ ರಸ್ತೆಗಳು ಮತ್ತು ವಾರ್ಡು ಮಟ್ಟದಲ್ಲಿ ಬೀದಿದೀಪಗಳ ವ್ಯವಸ್ಥೆ ಒಳಗೊಂಡಂತೆ, ಆದರೆ ಮೇಲು ಸೇತುವೆಗಳು, ಕೆಳ ಸೇತುವೆಗಳು, ಸುರಂಗ ಮಾರ್ಗಗಳು, ರಸ್ತೆಯ ಅಗಲೀಕರಣ, ವರ್ತುಲ ರಸ್ತೆಗಳು, ಎತ್ತರಿಸಿದ ರಸ್ತೆಗಳನ್ನು ಹೊರತುಪಡಿಸಿ, ಸಂಬಂಧಿಸಿದ ಕಾಮಗಾರಿಗಳನ್ನು ನಿರ್ವಹಿಸತಕ್ಕದ್ದು;

(ಎಫ್) ಲೆಕ್ಕ ಪತ್ರಗಳ ಸ್ಥಾಯೀ ಸಮಿತಿಯು ಲೆಕ್ಕಪತ್ರಗಳು ಮತ್ತು ಲೆಕ್ಕ ಪರಿಶೋಧನೆಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ನಿರ್ವಹಿಸತಕ್ಕದ್ದು;

(ಜಿ) ಶಿಕ್ಷಣ ಸ್ಥಾಯೀ ಸಮಿತಿಯು ದೈಹಿಕ ಶಿಕ್ಷಣ ಮತ್ತು ಕ್ರೀಡೆಗಳು ಒಳಗೊಂಡಂತೆ ಪ್ರಾಥಮಿಕ ಪೂರ್ವ, ಪ್ರಾಥಮಿಕ, ಪ್ರೌಢ ಮತ್ತು ಉನ್ನತ ಪ್ರೌಢ ಶಿಕ್ಷಣಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ನಿರ್ವಹಿಸತಕ್ಕದ್ದು;

(ಎಚ್) ಸಾಮಾಜಿಕ ನ್ಯಾಯ ಸ್ಥಾಯೀ ಸಮಿತಿಯು ಅನುಸೂಚಿತ ಜಾತಿ ಮತ್ತು ಅನಸೂಚಿತ ಪಂಗಡಗಳಿಗೆ ಮತ್ತು ಸಮಾಜದ ಇತರ ದುರ್ಬಲ ವರ್ಗಗಳಿಗೆ ಸೇರಿದ ವ್ಯಕ್ತಿಗಳಿಗಾಗಿ ಹಾಗೂ ಮಹಿಳೆಯರಿಗಾಗಿ ಸಾಮಾಜಿಕ ನ್ಯಾಯವನ್ನು ದೊರಕಿಸಿಕೊಡುವುದಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ನಿರ್ವಹಿಸತಕ್ಕದ್ದು;

(ಐ) ಅಪೀಲುಗಳ ಸ್ಥಾಯೀ ಸಮಿತಿಯು, ಅಪೀಲುಗಳಿಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ನಿರ್ವಹಿಸತಕ್ಕದ್ದು;

(ಜೆ) ತೋಟಗಾರಿಕೆ ಸ್ಥಾಯೀ ಸಮಿತಿಯು, ತೋಟಗಾರಿಕೆಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ನಿರ್ವಹಿಸತಕ್ಕದ್ದು;

(ಕೆ) ಮಾರುಕಟ್ಟೆಗಳ ಸ್ಥಾಯೀ ಸಮಿತಿಯು, ಮಾರುಕಟ್ಟೆಗಳಿಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ನಿರ್ವಹಿಸತಕ್ಕದ್ದು;

(ಎಲ್) ಸಿಬ್ಬಂದಿ ಮತ್ತು ಆಡಳಿತ ಸುಧಾರಣೆಗೆ ಸ್ಥಾಯೀ ಸಮಿತಿಯು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ನಿರ್ವಹಿಸತಕ್ಕದ್ದು".

**4. 88ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 88ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ "ತೆರಿಗೆ ಹಣಕಾಸು ಮತ್ತು ಅಪೀಲುಗಳು" ಎಂಬ ಪದಗಳ ತರುವಾಯ "ಅಥವಾ ಸಂದರ್ಭಾನುಸಾರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ" ಎಂಬ ಪದಗಳನ್ನು ಸೇರಿಸತಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಬೆಂಗಳೂರು ಮಹಾನಗರ ಪಾಲಿಕೆಯ ವಾರ್ಡ್ ಸಂಖ್ಯೆಯನ್ನು ಎರಡು ನೂರಕ್ಕೆ ಹೆಚ್ಚಿಸಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಾಗಿ ಪುನರ್ ರಚಿಸಿರುವುದನ್ನು ಗಮನಿಸಿ, ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976ರ 11ನೇ

ಪ್ರಕರಣವನ್ನು ತಿದ್ದುಪಡಿ ಮಾಡಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸ್ಥಾಯೀ ಸಮಿತಿಗಳ ಸಂಖ್ಯೆಯನ್ನು ಹನ್ನೆರಡಕ್ಕೆ ಹೆಚ್ಚಿಸುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚಗಳನ್ನು ಒಳಗೊಂಡಿರುವುದಿಲ್ಲ.

**ಬಿ.ಎಸ್. ಯಡಿಯೂರಪ್ಪ**
ಮುಖ್ಯಮಂತ್ರಿಗಳು
ಹಾಗೂ ಹಣಕಾಸು ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

**ಅನುಬಂಧ**

**ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ (1977ರ ಕರ್ನಾಟಕ ಅಧಿನಿಯಮ 14)**

**ಉದ್ಧೃತ ಭಾಗಗಳು**

xx xx xx

**11. ಸ್ಥಾಯೀ ಸಮಿತಿಗಳು.–** (1) ಬೆಂಗಳೂರು ನಗರದ ಪೌರ ನಿಗಮವನ್ನು ಹೊರತುಪಡಿಸಿ, ಇತರ ಪೌರನಿಗಮಗಳಲ್ಲಿ ಈ ಮುಂದಿನ ಸ್ಥಾಯೀ ಸಮಿತಿಗಳು ಇರತಕ್ಕದ್ದು, ಎಂದರೆ.–

(ಎ) ತೆರಿಗೆ ನಿರ್ಧರಣೆ ಮತ್ತು ಹಣಕಾಸುಗಳಿಗಾಗಿ ಸ್ಥಾಯೀ ಸಮಿತಿ.

(ಬಿ) ಸಾರ್ವಜನಿಕ ಆರೋಗ್ಯಕ್ಕಾಗಿನ ಸ್ಥಾಯೀ ಸಮಿತಿ.

(ಸಿ) ಪಟ್ಟಣ ಯೋಜನೆ ಮತ್ತು ಸುಧಾರಣೆಗಾಗಿ ಸ್ಥಾಯೀ ಸಮಿತಿ.

(ಡಿ) ಲೋಕೋಪಯೋಗಿ ಕಾಮಗಾರಿಗಾಗಿ ಸ್ಥಾಯೀ ಸಮಿತಿ.

(ಇ) ಲೆಕ್ಕ ಪತ್ರಗಳಿಗಾಗಿ ಸ್ಥಾಯೀ ಸಮಿತಿ.

(ಎಫ್)ಶಿಕ್ಷಣ ಮತ್ತು ಸಾಮಾಜಿಕ ನ್ಯಾಯಕ್ಕಾಗಿ ಸ್ಥಾಯೀ ಸಮಿತಿ.

(ಜಿ) ಅಪೀಲುಗಳಿಗಾಗಿ ಸ್ಥಾಯೀ ಸಮಿತಿ.

(ಎಚ್)ತೋಟಗಾರಿಕೆ ಮತ್ತು ಮಾರುಕಟ್ಟೆಗಾಗಿ ಸ್ಥಾಯೀ ಸಮಿತಿ.

(2) ಪ್ರತಿಯೊಂದು ಸ್ಥಾಯೀ ಸಮಿತಿಯು, ಸಾರ್ವತ್ರಿಕ ಚುನಾವಣೆಯ ತರುವಾಯ ನಿಗಮದ ಮೊದಲ ಸಭೆಯಲ್ಲಿ ಮತ್ತು ತರುವಾಯ ಬರುವ ವರ್ಷದ ಅದೇ ತಿಂಗಳಿನಲ್ಲಿನ ಮೊದಲ ಸಭೆಯಲ್ಲಿ ಏಕ ವರ್ಗಾವಣೀಯ ಮತದ ಮೂಲಕ ಪ್ರಮಾಣಾನುಸಾರ ಪ್ರಾತಿನಿಧ್ಯದ ತತ್ವಕ್ಕನುಸಾರವಾಗಿ ಚುನಾಯಿತರಾದ ಅದರ ಏಳು ಜನ ಕೌನ್ಸಿಲರುಗಳನ್ನು ಒಳಗೊಂಡಿರತಕ್ಕದ್ದು:

ಪರಂತು, ಸಾರ್ವಜನಿಕ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಅಥವಾ ಸಂದರ್ಭಾನುಸಾರ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯಕ್ಕಾಗಿನ ಸ್ಥಾಯೀ ಸಮಿತಿಗಳು ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳಿಗೆ ಸೇರಿದ ಇಬ್ಬರಿಗಿಂತ ಕಡಿಮೆಯಲ್ಲದ ಕೌನ್ಸಿಲರುಗಳನ್ನು ಒಳಗೊಂಡಿರತಕ್ಕದ್ದು."

xx xx xx

**61 ಎ. ಬೆಂಗಳೂರು ನಗರದ ಪೌರನಿಗಮದ ಸ್ಥಾಯೀ ಸಮಿತಿಗಳ ಪ್ರಕಾರ್ಯಗಳು.–** (1) ಬೆಂಗಳೂರು ನಗರದ ಪೌರ ನಿಗಮದ ಸ್ಥಾಯೀ ಸಮಿತಿಗಳು ಈ ಮುಂದಿನ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು, ಎಂದರೆ:–

(ಎ) ತೆರಿಗೆ ನಿರ್ಧರಣೆ ಮತ್ತು ಹಣಕಾಸಿನ ಸ್ಥಾಯೀ ಸಮಿತಿಯು, ಹಣಕಾಸು ಮತ್ತು ತೆರಿಗೆ ನಿರ್ಧರಣೆಗೆ ಸಂಬಂಧಪಟ್ಟ ಎಲ್ಲ ವಿಷಯಗಳ ಬಗ್ಗೆ ಮತ್ತು ಯಾವುದೇ ಇತರ ಸ್ಥಾಯೀ ಸಮಿತಿಗೆ ನಿರ್ದಿಷ್ಟವಾಗಿ ವಹಿಸಿಕೊಡದಿರುವ ಎಲ್ಲ ವಿಷಯಗಳ ಬಗ್ಗೆ ವ್ಯವಹರಿಸತಕ್ಕದ್ದು;

(ಬಿ) ಸಾರ್ವಜನಿಕ ಆರೋಗ್ಯ ಸಮಿತಿಯು, ಸಾರ್ವಜನಿಕ ಆರೋಗ್ಯಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳ ಬಗ್ಗೆ ವ್ಯವಹರಿಸತಕ್ಕದ್ದು;

(ಸಿ) ಪಟ್ಟಣ ಯೋಜನೆ ಮತ್ತು ಸುಧಾರಣೆಯ ಸ್ಥಾಯೀ ಸಮಿತಿಯು ಪಟ್ಟಣ ಯೋಜನೆ ಮತ್ತು ಸುಧಾರಣೆಗೆ ಸಂಬಂಧಪಟ್ಟ ಎಲ್ಲ ವಿಷಯಗಳ ಬಗ್ಗೆ ವ್ಯವಹರಿಸತಕ್ಕದ್ದು;

(ಡಿ) ಲೋಕೋಪಯೋಗಿ ಕಾಮಗಾರಿಗಳ ಸ್ಥಾಯೀ ಸಮಿತಿಯು ಲೋಕೋಪಯೋಗಿ ಕಾಮಗಾರಿಗಳಿಗೆ ಸಂಬಂಧಪಟ್ಟ ಎಲ್ಲ ವಿಷಯಗಳ ಬಗ್ಗೆ ವ್ಯವಹರಿಸತಕ್ಕದ್ದು;

(ಇ) ಲೆಕ್ಕಪತ್ರಗಳ ಸ್ಥಾಯೀ ಸಮಿತಿಯು, ಲೆಕ್ಕಪತ್ರಗಳಿಗೆ ಮತ್ತು ಲೆಕ್ಕಪರಿಶೋಧನೆಗೆ ಸಂಬಂಧಪಟ್ಟ ಎಲ್ಲ ವಿಷಯಗಳ ಬಗ್ಗೆ ವ್ಯವಹರಿಸತಕ್ಕದ್ದು;

(ಎಫ್) ಶಿಕ್ಷಣ ಮತ್ತು ಸಾಮಾಜಿಕ ನ್ಯಾಯಕ ಸ್ಥಾಯೀ ಸಮಿತಿಯು ಶಿಕ್ಷಣಕ್ಕೆ ಮತ್ತು ಅನುಸೂಚಿತ ಜಾತಿಗಳಿಗೆ ಮತ್ತು ಅನುಸೂಚಿತ ವರ್ಗಗಳಿಗೆ ಮತ್ತು ಸಮಾಜದ ಇತರ ದುರ್ಬಲ ವರ್ಗಗಳಿಗೆ ಸೇರಿದ ವ್ಯಕ್ತಿಗಳಿಗೆ ಮತ್ತು ಮಹಿಳೆಯರಿಗೆ ಸಾಮಾಜಿಕ ನ್ಯಾಯ ದೊರಕಿಸಿಕೊಡುವುದಕ್ಕೆ ಸಂಬಂಧಪಟ್ಟ ಎಲ್ಲಾ ವಿಷಯಗಳ ಬಗ್ಗೆ ವ್ಯವಹರಿಸತಕ್ಕದ್ದು;

(ಜಿ) ಅಪೀಲುಗಳ ಸ್ಥಾಯೀ ಸಮಿತಿಯು ಅಪೀಲುಗಳಿಗೆ ಸಂಬಂಧಪಟ್ಟ ಎಲ್ಲಾ ವಿಷಯಗಳ ಬಗ್ಗೆ ವ್ಯವಹರಿಸತಕ್ಕದ್ದು;

(ಎಚ್) ತೋಟಗಾರಿಕೆ ಮತ್ತು ಮಾರುಕಟ್ಟೆ ಸ್ಥಾಯೀ ಸಮಿತಿಯು, ತೋಟಗಾರಿಕೆ ಮತ್ತು ಮಾರುಕಟ್ಟೆಗೆ ಸಂಬಂಧಪಟ್ಟ ಎಲ್ಲಾ ವಿಷಯಗಳ ಬಗ್ಗೆ ವ್ಯವಹರಿಸತಕ್ಕದ್ದು.

XX XX XX

**88. ಸಿಬ್ಬಂದಿ ಅನುಸೂಚಿ.–** (1) ಕಮೀಷನರ ಅಭಿಪ್ರಾಯದಲ್ಲಿ ನಿಗಮದ ಸಿಬ್ಬಂದಿಯನ್ನು ಒಳಗೊಳ್ಳುವ ಅಧಿಕಾರಿಗಳ ಮತ್ತು ನೌಕರರ ಪದನಾಮಗಳು ಮತ್ತು ಗ್ರೇಡುಗಳನ್ನು ನಿರೂಪಿಸುವ ಮತ್ತು ಅವರಿಗೆ ಸಂದಾಯಮಾಡಬೇಕಾದ ಸಂಬಳಗಳು, ಫೀಜು ಮತ್ತು ಭತ್ಯೆಗಳ ಪ್ರಸ್ತಾವಗಳನ್ನು ಒಳಗೊಂಡ ಒಂದು ಅನುಸೂಚಿಯನ್ನು ತೆರಿಗೆ ನಿರ್ಧರಣೆ, ಹಣಕಾಸು ಮತ್ತು ಅಪೀಲುಗಳ ಸ್ಥಾಯೀ ಸಮಿತಿಯ ಮುಂದೆ ಅವನ್ನು ಇಡತಕ್ಕದ್ದು.

XX XX XX

## KARNATAKA LEGISLATIVE ASSEMBLY
## THIRTEENTH LEGISLATIVE ASSEMBLY
## SIXTH SESSION

## THE KARNATAKA MUNICIPAL CORPORATIONS (AMENDMENT) BILL, 2010
## (L.A. Bill No. 21 of 2010)

A Bill further to amend the Karnataka Municipal Corporations Act, 1976.

Whereas it is expedient further to amend the Karnataka Municipal Corporations Act, 1976 (Karnataka Act 14 of 1977) for the purpose hereinafter appearing;

Be it enacted by the Karnataka State Legislature in the sixty first year of the Republic of India as follows, namely:-

**1. Short title and commencement.-** (1) This Act may be called the Karnataka Municipal Corporations (Amendment) Act, 2010.

(2) It shall come into force at once.

**2. Amendment of section 11.-** In the Karnataka Municipal Corporations Act, 1976 (Karnataka Act 14 of 1977) (hereinafter referred to as the principal Act), for sub-section (1-A) and sub-section (2), the following shall be substituted, namely:-

"(1-A) There shall be the following Standing Committees for the Bruhat Bangalore Mahanagara Palike, namely:-

(a) the Standing Committee for taxation and finance;

(b) the Standing Committee for public health;

(c) the Standing Committee for town planning and improvement;

(d) the Standing Committee for major public works;

(e) the Standing Committee for ward level public works;

(f) the Standing Committee for accounts;

(g) the Standing Committee for education;

(h) the Standing Committee for social justice;

(i) the Standing Committee for appeals;

(j) the Standing Committee for horticulture;

(k) the Standing Committee for markets;

(l) the Standing Committee for establishment and Administrative Reforms.

(2) Each Standing Committee,-

(a) for Corporations other than the Bruhat Bangalore Mahanagara Palike shall consist of seven Councillors of the Corporation; and

(b) for Bruhat Bangalore Mahanagara Palike shall consist of eleven Councillors of Corporation

elected at the first meeting of the corporation after the general elections and at the first meeting in the same month in each succeeding year according to the principle of proportionate representation by means of single transferable vote:

Provided that the Standing Committee for public health, education and social justice or as the case may be, the standing committee for social justice shall consist of not less than two Councillors belonging to the Scheduled Castes and Scheduled Tribes."

**3. Amendment of section 61A.-** In section 61A of the principal Act, for sub-section (1), the following shall be substituted, namely:-

"(1) The Standing Committees for the Bruhat Bangalore Mahanagara Palike shall perform the following functions, namely:-

(a) the Standing Committee for taxation and finance shall deal with all matters relating to finance and taxation and all matters not specifically assigned to any other standing committee;

(b) the Standing Committee for public health shall deal with all matters relating to public health;

(c) the Standing Committee for town planning and improvement shall deal with all matters relating to town planning and improvement;

(d) the Standing Committee for major works shall deal with all major works in the jurisdiction of Bruhat Bangalore Mahanagara Palike like Flyovers, Underpasses, Subways, Road Widening, Ring Roads, Elevated Roads and all works incidental thereto including land acquisition;

(e) the Standing Committee for ward level works shall deal with public streets and its appurtenances including street lighting at the ward level excluding the major works like Flyovers, Underpasses, Subways, Road Widening, Ring Roads, Elevated Roads;

(f) the Standing Committee for Accounts shall deal with all matters relating to accounts and audit;

(g) the Standing Committee for Education shall deal with all matters relating to preprimary, primary, secondary and higher secondary education including physical education and sports;

(h) the Standing Committee for Social Justice shall deal with all matters relating to securing the social justice to persons belonging to the Scheduled Castes and Scheduled Tribes and other weaker sections of the society and women;

(i) the Standing Committee for appeals shall deal with all matters relating to appeals;

(j) the Standing Committee for horticulture shall deal with all matters relating to horticulture;

(k) the Standing Committee for markets shall deal with all matters relating to the markets;

(l) the Standing Committee for establishment and administrative reforms shall deal with all matters relating to establishment and administrative reforms."

**4. Amendment of section 88.-** In section 88 of the principal Act, in sub-section (1), after the words "taxation, finance and appeals", the words "or establishment and administrative reforms" as the case may be shall be inserted.

## STATEMENT OF OBJECTS AND REASONS

In view of the Bangalore Mahanagara Palike reconstituted as Bruhat Bangalore Mahanagara Palike by increasing the number of wards to two hundred, it is considered necessary to enhance the number of standing committees of the Bruhat Bangalore Mahanagara Palike to twelve by amending section 11 of the Karnataka Municipal Corporation Act, 1976.

Hence the Bill.

## FINANCIAL MEMORANDUM

There is no additional expenditure involved in the proposed legislative measure.

**B.S.YEDDYURAPPA**
Chief Minister

**S.B. PATIL**
Secretary
Karnataka Legislative Assembly

## ANNEXURE

**Extract from the Karnataka Municipal Corporations Act, 1976**
**(Karnataka Act No. 14 of 1977)**

XX XX XX

**11. Standing Committees.-**(1) There shall be the following Standing Committees for the corporations other than the corporation of the city of Bangalore, namely:-

XX XX XX

(1A) There shall be the following Standing Committees for the corporation of the city of Bangalore, namely:-

(a) the Standing Committee for taxation and finance;

(b) the Standing Committee for public health;

(c) the Standing Committee for town planning and improvement;

(d) the Standing Committee for public works;

(e) the Standing Committee for accounts;

(f) the Standing Committee for education and social justice;

(g) the Standing Committee for appeals;

(h) The Standing Committee for Horticulture and marketing;

(2) Each standing committee shall consist of seven councillors of the corporation elected at its first meeting after the general elections and at the first meeting in the same month in each succeeding year according to the principle of proportionate representation by means of the single transferable vote:

Provided that the Standing Committee for public health, education and social justice or as the case may be, the Standing Committee for education and social justice shall consist of not less than two Councillors belonging to the Scheduled Castes and the Scheduled Tribes.

XX XX XX

**61A. Functions of the Standing Committees of the Corporation of the City of Bangalore.-**(1) The Standing Committees for the corporation of the city of Bangalore shall perform the following functions, namely :-

(a) The Standing Committee for taxation and finance shall deal with all matters relating to finance and taxation and all matters not specifically assigned to any other Standing Committee;

(b) The Standing Committee for public health shall deal with all matters relating to public health ;

(c) The Standing Committee for town planning and improvement shall deal with all matters relating to town planning and improvement;

(d) The Standing Committee for public works shall deal with all matters relating to public works;

(e) The Standing Committee for accounts shall deal with all matters relating to accounts and audit;

(f) The Standing Committee for education and social justice shall deal with all matters relating to education and securing the social justice to persons belonging to the Scheduled Castes and Scheduled Tribes and other weaker sections of the society and women;

(g) The Standing Committee for appeal shall deal with all matters relating to appeals;

(h) The Standing Committee for horticulture and marketing shall deal with all matters relating to horticulture and marketing;

XX XX XX

**88. Establishment schedule.-**(1) The Commissioner shall lay before the standing committee for taxation, finance and appeals a Schedule setting forth the designations and grades of the officers and servants who should in his opinion constitute the corporation establishment and embodying his proposals with regard to the salaries, fees and allowances payable to them.

XX XX XX

**ವಿಶೇಷ ಪತ್ರಿಕೆ**

| ಭಾಗ – **IV-A** | ಬೆಂಗಳೂರು, ಶುಕ್ರವಾರ, ಜುಲೈ ೧೬, ೨೦೧೦ (ಆಷಾಢ ೨೫, ಶಕ ವರ್ಷ ೧೯೩೨) | ನಂ. ೮೨೮ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/148/Bill/2010, Bangalore, Dated: 16th July, 2010**

The following Bill was introduced in Legislative Assembly on 16.7.2010.

**THE KARNATAKA HIGHWAYS (AMENDMENT) BILL, 2010**
**(L.A. Bill No. 23 of 2010)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಆರನೇ ಅಧಿವೇಶನ**

**ಕರ್ನಾಟಕ ಹೆದ್ದಾರಿಗಳ (ತಿದ್ದುಪಡಿ) ವಿಧೇಯಕ, 2010**
**(2010ರ ವಿಧಾನಸಭೆಯ ವಿಧೇಯಕ ಸಂಖ್ಯೆ 23)**

ಕರ್ನಾಟಕ ಹೆದ್ದಾರಿಗಳ ಅಧಿನಿಯಮ, 1964ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇದರಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಹೆದ್ದಾರಿಗಳ ಅಧಿನಿಯಮ, 1964ನ್ನು (1964ರ ಕರ್ನಾಟಕ ಅಧಿನಿಯಮ 44) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

**ಈಗ ಭಾರತ ಗಣರಾಜ್ಯದ ಅರವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ;–**

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು **ಕರ್ನಾಟಕ ಹೆದ್ದಾರಿಗಳ (ತಿದ್ದುಪಡಿ) ಅಧಿನಿಯಮ, 2010** ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 19ಎ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಹೆದ್ದಾರಿಗಳ ಅಧಿನಿಯಮ, 1964ರಲ್ಲಿ (1964ರ ಕರ್ನಾಟಕ ಅಧಿನಿಯಮ 44) (ಇದರಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ), 19ಎ ಪ್ರಕರಣದಲ್ಲಿ,–

(i) (3)ನೇ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು:–

"(3ಎ) 48ಎ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಅದು ಅಧಿಸೂಚಿಸಬಹುದಾದಂತೆ, ಅದು ಒದಗಿಸಿದ ಸೇವೆಗಳಿಗಾಗಿ ಅಥವಾ ಪ್ರಯೋಜನಗಳಿಗಾಗಿ ಹೆದ್ದಾರಿ ಬಳಕೆದಾರರಿಗೆ ಅಂಥ ಶುಲ್ಕದ ದರವನ್ನು

ವಿಧಿಸಬಹುದು ಮತ್ತು ಅವರಿಂದ ಸಂಗ್ರಹಿಸಬಹುದು, ಭೂ ಸ್ವಾಧೀನದ ವೆಚ್ಚ ಮತ್ತು ವಾರ್ಷಿಕ ಕಂತು ಆಧಾರದ ಮೇಲೆ ಸಾರ್ವಜನಿಕ–ಖಾಸಗಿ ಪಾಲುದಾರಿಕೆಯಲ್ಲಿ ಅಥವಾ ಸಾಲ ಎತ್ತುವ ಮೂಲಕ ಅಥವಾ ಅನ್ಯಥಾ ಅಭಿವೃದ್ಧಿಪಡಿಸಿದ ಹೆದ್ದಾರಿಯ ನಿರ್ಮಾಣ, ಅಭಿವೃದ್ಧಿ ಮತ್ತು ನಿರ್ವಹಣೆಯ ವೆಚ್ಚ ಇವುಗಳನ್ನು ಗಮನಿಸಿ ವಿವಿಧ ಹೆದ್ದಾರಿಗಳಿಗಾಗಿ ವಿವಿಧ ಕಾಲಾವಧಿಯವರೆಗೆ ವಿವಿಧ ದರಗಳನ್ನು ಅಧಿಸೂಚಿಸಬಹುದು"

(ii) 4ನೇ ಉಪ ಪ್ರಕರಣದಲ್ಲಿ, "(1)ನೇ ಉಪ ಪ್ರಕರಣದಲ್ಲಿ ಉಲ್ಲೇಖಿಸಲಾದ ವ್ಯಕ್ತಿಯು" ಎಂಬ ಆವರಣ ಚಿಹ್ನೆಗಳು, ಅಂಕಿ ಮತ್ತು ಪದಗಳ ತರುವಾಯ "ಅಥವಾ ರಾಜ್ಯಸರ್ಕಾರವು" ಎಂಬ ಪದಗಳನ್ನು ಸೇರಿಸತಕ್ಕದ್ದು.

**3. 19ಬಿ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 19ಬಿ ಪ್ರಕರಣದಲ್ಲಿ "19ಎ ಪ್ರಕರಣದ (1)ನೇ ಉಪ ಪ್ರಕರಣದಲ್ಲಿ" ಎಂಬ ಅಂಕಿಗಳು, ಅಕ್ಷರ, ಪದಗಳು ಮತ್ತು ಆವರಣ ಚಿಹ್ನೆಗಳಿಗೆ "19ಎ ಪ್ರಕರಣದ (1)ನೇ ಉಪ ಪ್ರಕರಣ ಮತ್ತು (3ಎ) ಉಪ ಪ್ರಕರಣದಲ್ಲಿ " ಎಂಬ ಅಂಕಿಗಳು, ಅಕ್ಷರಗಳು, ಪದಗಳು ಮತ್ತು ಆವರಣ ಚಿಹ್ನೆಗಳನ್ನು ಪ್ರತಿಯೋಜಿಸತಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ವಾರ್ಷಿಕ ಕಂತು ಆಧಾರದ ಮೇಲೆ ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ನಿರ್ಮಿಸಿದ, ಅಭಿವೃದ್ಧಿ ಪಡಿಸಿದ ಮತ್ತು ನಿರ್ವಹಿಸಿದ ರಾಜ್ಯ ಹೆದ್ದಾರಿ/ದೊಡ್ಡ ಜಿಲ್ಲಾ ರಸ್ತೆಗಳ ಸುಧಾರಣೆಗಾಗಿ ಒಳಗೊಂಡ ವೆಚ್ಚವನ್ನು ಭರಿಸುವುದಕ್ಕಾಗಿ, ಅದು ನೀಡುವ ಸೇವೆ ಅಥವಾ ಪ್ರಯೋಜನಗಳಿಗಾಗಿ ಶುಲ್ಕದ ರೂಪದಲ್ಲಿ ಮೊಬಲಗನ್ನು, ಬಳಕೆದಾರರ ಮೇಲೆ ವಿಧಿಸುವುದು ಮತ್ತು ಅವರಿಂದ ಸಂಗ್ರಹಿಸಲು ಉಪಬಂಧ ಕಲ್ಪಿಸುವುದಕ್ಕಾಗಿ ಕರ್ನಾಟಕ ಹೆದ್ದಾರಿಗಳ ಅಧಿನಿಯಮ, 1964ನ್ನು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಸಿ.ಎಂ. ಉದಾಸಿ**
ಲೋಕೋಪಯೋಗಿ ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

## ಅನುಬಂಧ

### ಕರ್ನಾಟಕ ಹೆದ್ದಾರಿಗಳ ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ) ಉದ್ಧೃತ ಭಾಗ

XX XX XX

**19ಎ. ಹೆದ್ದಾರಿಗಳ ಅಭಿವೃದ್ಧಿ ಮತ್ತು ನಿರ್ವಹಣೆಗಾಗಿ ಒಪ್ಪಂದ ಮಾಡಿಕೊಳ್ಳಲು ರಾಜ್ಯ ಸರ್ಕಾರದ ಅಧಿಕಾರ.–**

XX XX XX

(3) 48ಎ ಪ್ರಕರಣದಲ್ಲಿ ಏನೇ ಇದ್ದರೂ, (1)ನೇ ಉಪ-ಪ್ರಕರಣದಲ್ಲಿ ಉಲ್ಲೇಖಿಸಲಾದ ವ್ಯಕ್ತಿಯು, ಅವನು ಸಲ್ಲಿಸಿದ ಸೇವೆ ಅಥವಾ ಸೌಲಭ್ಯಗಳಿಗಾಗಿ, ಭೂಮಿಯ ಸ್ವಾಧೀನ ಮತ್ತು ಹೆದ್ದಾರಿಯ ನಿರ್ಮಾಣ, ಅಭಿವೃದ್ಧಿ ಮತ್ತು ನಿರ್ವಹಣೆಗೆ ತಗುಲಿದ ವೆಚ್ಚವನ್ನು ಗಮನದಲ್ಲಿಟ್ಟುಕೊಂಡು ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆ ಹೊರಡಿಸಿ ನಿರ್ದಿಷ್ಟಪಡಿಸ ಬಹುದಾದಂಥ ದರ ಅಥವಾ ದರಗಳಲ್ಲಿ ಶುಲ್ಕವನ್ನು ಸಂಗ್ರಹಿಸಲು ಮತ್ತು ಅದನ್ನು ಇಟ್ಟುಕೊಳ್ಳಲು ಅವನು ಹಕ್ಕು ಹೊಂದಿರುತ್ತಾನೆ.

(4) (1)ನೇ ಉಪ-ಪ್ರಕರಣದಲ್ಲಿ ಉಲ್ಲೇಖಿಸಲಾದ ವ್ಯಕ್ತಿಯು, ಅಂಥ ಒಪ್ಪಂದದ ವಸ್ತು ವಿಷಯವಾದ ಹೆದ್ದಾರಿಯ ಯುಕ್ತ ನಿರ್ವಹಣೆಗಾಗಿ, ಮೋಟಾರು ವಾಹನಗಳ ಅಧಿನಿಯಮ, 1988 (1988ರ ಕೇಂದ್ರ ಅಧಿನಿಯಮ 59)ರ VIIIನೇ ಅಧ್ಯಾಯದಲ್ಲಿ ಒಳಗೊಂಡಿರುವ ಉಪಬಂಧಗಳಿಗೆ ಅನುಸಾರವಾಗಿ ಆ ಹೆದ್ದಾರಿಯಲ್ಲಿ ಸಂಚಾರವನ್ನು ವಿನಿಯಮಿಸಲು ಮತ್ತು ನಿಯಂತ್ರಿಸಲು ಅಧಿಕಾರವನ್ನು ಹೊಂದಿರತಕ್ಕದ್ದು.

XX XX XX

**19ಬಿ. ಹೆದ್ದಾರಿಗೆ ಹಾನಿಮಾಡುವ ಕಿಡಿಗೇಡಿ ಕೃತ್ಯಕ್ಕೆ ದಂಡನೆ.–** 19ಎ ಪ್ರಕರಣದ (1)ನೇ ಉಪ-ಪ್ರಕರಣದಲ್ಲಿ ಉಲ್ಲೇಖಿಸಿದ ಯಾವುದೇ ಹೆದ್ದಾರಿಯನ್ನು, ಪ್ರಯಾಣದ ಅಥವಾ ಸ್ವತ್ತು ಸಾಗಣೆಯ ವಾಹನಗಳು ಹಾದುಹೋಗಲಾಗದಂತೆ ಅಥವಾ ಕಡಿಮೆ ಸುರಕ್ಷಿತವಾಗಿರುವಂತೆ ಮಾಡುವ ಅಥವಾ ಅದಕ್ಕೆ ಹಾಗೆ ಅಗುವಂತೆ ಮಾಡುವ ಸಂಭವವಿದೆಯೆಂದು ತನಗೆ ತಿಳಿದಿರುವ ಯಾವುದೇ ಕಿಡಿಗೇಡಿ ಕೃತ್ಯವನ್ನು ಎಸಗುವ ಯಾರನ್ನೇ ಆಗಲಿ ಒಂದು ವರ್ಷದವರೆಗೆ ವಿಸ್ತರಿಸಬಹುದಾದಂಥ ಅವಧಿಗೆ, ಎರಡರಲ್ಲಿ ಒಂದು ರೀತಿಯ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿಸತಕ್ಕದ್ದು.

**ವಿವರಣೆ.–** ಈ ಪ್ರಕರಣದ ಉದ್ದೇಶಕ್ಕಾಗಿ, 'ಕಿಡಿಗೇಡಿ ಕೃತ್ಯ' ಎಂಬ ಪದವು, ಯಾವುದೇ ಹೆದ್ದಾರಿಯ ಮೇಲೆ ನ್ಯಾಯಸಮ್ಮತ ಬೇಡಿಕೆಯನ್ನು ಈಡೇರಿಸುವಂತೆ ಒತ್ತಾಯಪಡಿಸುವ ಯಾರೇ ವ್ಯಕ್ತಿಯು ಅಥವಾ ವ್ಯಕ್ತಿಗಳ ಗುಂಪು ನಡೆಸುವ ಯಾವುದೇ ಶಾಂತಿಯುತ ಪ್ರದರ್ಶನ ಅಥವಾ ಚಳುವಳಿಯನ್ನು ಒಳಗೊಳ್ಳತಕ್ಕದ್ದಲ್ಲ.

**XX XX XX**

**KARNATAKA LEGISLATIVE ASSEMBLY**
**THIRTEENTH LEGISLATIVE ASSEMBLY**
**SIXTH SESSION**

## THE KARNATAKA HIGHWAYS (AMENDMENT) BILL, 2010
## (L.A. Bill No. 23 of 2010)

A Bill further to amend the Karnataka Highways Act, 1964.

Whereas, it is expedient further to amend the Karnataka Highways Act, 1964 (Karnataka Act 44 of 1964) for the purposes hereinafter appearing;

Be it enacted by the Karnataka State Legislature in the sixty-first year of the Republic of India, as follows:-

**1. Short title and commencement.-** (1) This Act may be called the Karnataka Highways (Amendment) Act, 2010.

(2) It shall come into force at once.

**2. Amendment of section 19A.-** In the Karnataka Highways Act, 1964 (Karnataka Act 44 of 1964) (hereinafter referred to as the principal Act), in section 19A,-

(i) after sub-section (3), the following shall be inserted, namely:-

"(3A) Notwithstanding anything contained in section 48A, the Government may levy and collect, such rate of fee from the user of highways for service or benefits rendered by it, as may be notified by it in the official Gazette, different rates may be notified for different highways over different period of time, having regard to the expenditure involved in cost of acquisition of land and construction, development and maintenance of highway developed under public private partnership on annuity basis or by raising any loan or otherwise."

(ii) in sub-section (4), after the words, brackets and figure "in sub-section (1)", the words "or State Government" shall be inserted.

**3. Amendment of section 19B.-** In section 19B of the principal Act, for the words, brackets, figures and letter "in sub-section (1) of section 19A", the words, brackets, figures and letter "in sub-section(1) and sub-section (3A) of section 19A" shall be substituted.

### STATEMENT OF OBJECTS AND REASONS

It is considered necessary to amend the Karnataka Highways Act, 1964, to provide for enabling provision to levy and collect from the users, the amount in form of fee for the service or benefit rendered by it to meet the expenditure involved in improvement of State highway/major district road constructed, developed and maintained under Public Private partnership on annuity basis.

Hence the Bill.

### FINANCIAL MEMORANDUM

There is no extra Expenditure involved by the proposed legislative measure.

**C.M. UDASI**
Minister for P.W.D.

**S.B. PATIL**
Secretary
Karnataka Legislative Assembly

## ANNEXURE

**Extract from the Karnataka Highways Act, 1964**

**(Karnataka Act No. 44 of 1964)**

xx xx xx

**19A. Power of the State Government to enter into agreement for development and maintenance of Highways.—**

xx xx xx

(3) Notwithstanding anything contained in section 48A the person referred to in sub-section (1) is entitled to collect and retain fee at such rate or rates, for service or benefits rendered by him as the State Government may by notification in the official Gazette, specify having regard to the expenditure involved in cost of acquisition of land and construction, development and maintenance of highway.

(4) A person referred to in sub-section (1) shall have powers to regulate and control the traffic in accordance with the provisions contained in Chapter VIII of the Motor Vehicles Act, 1988 (Central Act 59 of 1988) on the highway forming subject matter of such agreement, for proper management thereof.

**19B. Punishment for mischief by injury to highway.**—Whoever commits mischief by doing any act which renders or which he knows to be likely to render any highway referred to in sub-section (1) of section 19A impassable or less safe for travelling or conveying property shall be punished with imprisonment of either description for a term which may extend to one year or with fine or with both.

**Explanation**.—For the purpose of this section, the expression “mischief” shall not include any peaceful demonstration or agitation held by any person or group of persons on any highway urging fulfilment of any legitimate demand.

xx xx xx


# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ, ಜುಲೈ ೧೬, ೨೦೧೦ (ಆಷಾಢ ೨೫, ಶಕ ವರ್ಷ ೧೯೩೨) | ನಂ. ೮೨೯ |
|---|---|---|


**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/150/Bill/2010, Bangalore, Dated: 16th July, 2010**

The following Bill was introduced in Legislative Assembly on 16.7.2010.

**THE KARNATAKA LOKAYUKTA (AMENDMENT) BILL, 2010**

**(L.A. Bill No. 25 of 2010)**

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನಸಭೆ**

**ಆರನೇ ಅಧಿವೇಶನ**

**ಕರ್ನಾಟಕ ಲೋಕಾಯುಕ್ತ (ತಿದ್ದುಪಡಿ) ವಿಧೇಯಕ, 2010**

**(2010ರ ವಿಧಾನಸಭೆಯ ವಿಧೇಯಕ ಸಂಖ್ಯೆ 25)**

ಕರ್ನಾಟಕ ಲೋಕಾಯುಕ್ತ ಅಧಿನಿಯಮ, 1984ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನುಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಲೋಕಾಯುಕ್ತ ಅಧಿನಿಯಮ, 1984ನ್ನು (1985ರ ಕರ್ನಾಟಕ ಅಧಿನಿಯಮ 4) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ತೊಂದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು **ಕರ್ನಾಟಕ ಲೋಕಾಯುಕ್ತ (ತಿದ್ದುಪಡಿ) ಅಧಿನಿಯಮ, 2010** ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 2ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಲೋಕಾಯುಕ್ತ ಅಧಿನಿಯಮ, 1984ರ (ಇಲ್ಲಿ ಇನ್ನುಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 2ನೇ ಪ್ರಕರಣದ (13)ನೇ ಖಂಡದಲ್ಲಿ "ಎಂದರೆ, ಕರ್ನಾಟಕ ಸರ್ಕಾರದ ಕಾರ್ಯದರ್ಶಿ" ಎಂಬ ಪದಗಳಿಗೆ " ಎಂದರೆ, ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿ, ಅಪರ ಮುಖ್ಯ ಕಾರ್ಯದರ್ಶಿ, ಪ್ರಧಾನ ಕಾರ್ಯದರ್ಶಿ, ಕಾರ್ಯದರ್ಶಿ ಅಥವಾ ಕಾರ್ಯದರ್ಶಿ–II" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**3. 7ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 7ನೇ ಪ್ರಕರಣದಲ್ಲಿ,–

(1) (1)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು,–

(ಎ) (i) ಮುಖ್ಯಮಂತ್ರಿ;

(ii) ಒಬ್ಬ ಮಂತ್ರಿ;

(iii) ರಾಜ್ಯ ವಿಧಾನಮಂಡಲದ ಒಬ್ಬ ಸದಸ್ಯ;

(iv) ಒಂದು ಸಂಘ, ಸಹಕಾರ ಸಂಘ ಅಥವಾ ಕಂಪನಿಗಳ ಅಧಿನಿಯಮ, 1956ರ 617ನೇ ಪ್ರಕರಣದ ಅರ್ಥವ್ಯಾಪ್ತಿಯೊಳಗಿನ ಸರ್ಕಾರಿ ಕಂಪನಿಯು ಒಳಗೊಂಡಂತೆ ಒಂದು ಪ್ರಾಧಿಕಾರ, ಮಂಡಳಿ ಅಥವಾ ಸಮಿತಿಯ ಅಥವಾ ನಿಗಮದ ಅಥವಾ ರಾಜ್ಯ ವಿಧಾನಮಂಡಲದ ಯಾವುದೇ ಕಾನೂನಿನ ಮೂಲಕ ಅಥವಾ ಅಡಿಯಲ್ಲಿ ಸ್ಥಾಪಿತವಾದ, ಶಾಸನಾತ್ಮಕವಾದ ಅಥವಾ ಶಾಸನಾತ್ಮಕವಲ್ಲದ, ಒಂದು ನಿಕಾಯದ, ರಾಜ್ಯ ಸರ್ಕಾರದಿಂದ ನಾಮ ನಿರ್ದೇಶಿತರಾದ ಒಬ್ಬ ಅಧ್ಯಕ್ಷ ಅಥವಾ ಉಪಾಧ್ಯಕ್ಷ (ಯಾವುದೇ ಹೆಸರಿನಿಂದ ಕರೆದಿರಲಿ) ಅಥವಾ ಒಬ್ಬ ಸದಸ್ಯನು,

– ಕೈಗೊಂಡ ಅಥವಾ ಅವನ ಸಾಮಾನ್ಯ ಅಥವಾ ವಿಶೇಷ ಅನುಮೋದನೆಯೊಡನೆ ಕೈಗೊಂಡ ಯಾವುದೇ ಕ್ರಮದ ಸಂಬಂಧದಲ್ಲಿ ಒಂದು ದೂರು ಅಥವಾ ಆಪಾದನೆಯನ್ನು ಒಳಗೊಂಡ ಫಿರ್ಯಾದನ್ನು ಸಲ್ಲಿಸಲಾದ ಸಂದರ್ಭದಲ್ಲಿ,

(ಬಿ) ಮಾಸಿಕ ಇಪ್ಪತ್ತು ಸಾವಿರ ರೂಪಾಯಿಗಳಿಗಿಂತ ಹೆಚ್ಚಿನ, ನಿಗದಿತ ವೇತನ, ಸಂಬಳ ಅಥವಾ ಗೌರವಧನವನ್ನಾಗಲೀ ಅಥವಾ ಕಾಲಕಾಲಕ್ಕೆ ಪರಿಷ್ಕರಿಸಬಹುದಾದ, ಇಪ್ಪತ್ತು ಸಾವಿರ ರೂಪಾಯಿಗಳಿಗೂ ಹೆಚ್ಚಿನ ಕನಿಷ್ಠ ವೇತನವುಳ್ಳ ವೇತನ ಶ್ರೇಣಿಯ ಒಂದು ಹುದ್ದೆ ಅಥವಾ ಪದವನ್ನು ಹೊಂದಿರುವ ಯಾವೊಬ್ಬ ಇತರ ಸಾರ್ವಜನಿಕ ನೌಕರನು ಕೈಗೊಂಡ ಅಂಥ ಕ್ರಮದ ಸಂದರ್ಭದಲ್ಲಿ ಅಥವಾ ಅಂಥ ಕ್ರಮವು ಒಂದು ದೂರು ಅಥವಾ ಆಪಾದನೆಯ ವಸ್ತುವಾಗಬಹುದೆಂದು ಅಥವಾ ಆಗಿರಬಹುದಾಗಿತ್ತೆಂದು ಲೋಕಾಯುಕ್ತನು ಅಭಿಪ್ರಾಯಪಡುವ ಯಾವುದೇ ಸಂದರ್ಭದಲ್ಲಿ

– ಲೋಕಾಯುಕ್ತನು ಅಂಥ ಕ್ರಮದ ಬಗ್ಗೆ ತನಿಖೆ ನಡೆಸಬಹುದು."

(2) (2)ನೇ ಉಪ ಪ್ರಕರಣದಲ್ಲಿ, "ಲೋಕಾಯುಕ್ತನು" ಎಂಬ ಪದಕ್ಕೆ "ಉಪಲೋಕಾಯುಕ್ತನು ಲಿಖಿತದಲ್ಲಿ ದಾಖಲ್ಮಾಡಿದ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(3) (4)ನೇ ಉಪ ಪ್ರಕರಣದಲ್ಲಿ, "ಉಪ-ಪ್ರಕರಣ (1)ರಿಂದ (3)ರಲ್ಲಿ ಏನೇ ಒಳಗೊಂಡಿದ್ದರೂ," ಎಂಬ ಪದಗಳ ತರುವಾಯ "ಉಪಲೋಕಾಯುಕ್ತನ ಪದವು ಆತನ ಮರಣ, ರಾಜೀನಾಮೆ, ನಿವೃತ್ತಿ, ತೆಗೆದುಹಾಕುವುದು ಅಥವಾ ಅನ್ಯಥಾ ಕಾರಣಗಳಿಂದಾಗಿ ರಿಕ್ತವಾದಾಗ ಅಥವಾ" ಎಂಬ ಪದಗಳನ್ನು ಸೇರಿಸತಕ್ಕದ್ದು.

**4. 9ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 9ನೇ ಪ್ರಕರಣದಲ್ಲಿ,–

(1) (1)ನೇ ಉಪ ಪ್ರಕರಣದ ತರುವಾಯ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ.–

"ಪರಂತು, ದೂರುಗಳ ಸಂದರ್ಭದಲ್ಲಿ ಬಾಧಿತ ವ್ಯಕ್ತಿಯು ಮರಣ ಹೊಂದಿದ್ದಲ್ಲಿ ಅಥವಾ ಯಾವುದೇ ಕಾರಣಕ್ಕಾಗಿ ಕಾರ್ಯ ನಿರ್ವಹಿಸಲು ಆತನು ಸ್ವತ: ಅಸಮರ್ಥನಾಗಿದ್ದರೆ, ಆತನ ಪರವಾಗಿ ಆತನ ಕಾನೂನುಬದ್ಧ ಪ್ರತಿನಿಧಿಗಳು ಅಥವಾ ಈ ಸಂಬಂಧದಲ್ಲಿ ಲಿಖಿತದಲ್ಲಿ ಆತನು ಪ್ರಾಧಿಕರಿಸಿದ ಯಾವೊಬ್ಬ ಇತರ ವ್ಯಕ್ತಿಯು ಫಿರ್ಯಾದನ್ನು ಸಲ್ಲಿಸಬಹುದು ಅಥವಾ ಈಗಾಗಲೇ ಸಲ್ಲಿಸಿದ್ದರೆ, ಅಭಿಯೋಜನೆ ನಡೆಸಬಹುದು".

(2) (3)ನೇ ಉಪಪ್ರಕರಣದಲ್ಲಿ,–

(i) (ಎ) ಖಂಡದಲ್ಲಿ "ಫಿರ್ಯಾದಿನ" ಎಂಬ ಪದದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ.–

"ಮತ್ತು ತನಿಖೆಯನ್ನು ಆತನು ತಾನಾಗಿಯೇ ಪ್ರಾರಂಭಿಸಿದ್ದರೆ, (7)ನೇ ಪ್ರಕರಣದ (1) ಅಥವಾ ಸಂದರ್ಭಾನುಸಾರ (2) ನೇ ಉಪಪ್ರಕರಣದ ಅಡಿಯಲ್ಲಿ ತನಿಖೆಯನ್ನು ಪ್ರಾರಂಭಿಸುವುದಕ್ಕಾಗಿ ದಾಖಲಿಸಿದ ತನ್ನ ಅಭಿಪ್ರಾಯದ"

(ii) (ಬಿ) ಖಂಡದಲ್ಲಿ "ಫಿರ್ಯಾದಿನ" ಎಂಬ ಪದದ ತರುವಾಯ "ಅಥವಾ 7ನೇ ಪ್ರಕರಣದ (1) ಮತ್ತು ಸಂದರ್ಭಾನುಸಾರ (2)ನೇ ಉಪಪ್ರಕರಣದ ಅಡಿಯಲ್ಲಿ ದಾಖಲಿಸಿದ ಅಭಿಪ್ರಾಯದ" ಎಂಬ ಪದಗಳನ್ನು ಸೇರಿಸತಕ್ಕದ್ದು.

**5. 13ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 13ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ, "ಘೋಷಣೆಯನ್ನು ಅಂಗೀಕರಿಸಬಹುದು ಅಥವಾ ತಿರಸ್ಕರಿಸಬಹುದು" ಎಂಬ ಪದಗಳಿಗೆ ಮೊದಲು ಅವುಗಳು ಕಂಡುಬರುವ ಎರಡು ಕಡೆಗಳಲ್ಲಿ "ಅಹವಾಲನ್ನು ಹೇಳಿಕೊಳ್ಳುವುದಕ್ಕೆ ಅವಕಾಶವನ್ನು ನೀಡಿದ ತರುವಾಯ" ಎಂಬ ಪದಗಳನ್ನು ಸೇರಿಸತಕ್ಕದ್ದು.

**6. 15ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 15ನೇ ಪ್ರಕರಣದಲ್ಲಿ,–

(1) (3)ನೇ ಉಪಪ್ರಕರಣದ (ಎಎ) ಖಂಡದಲ್ಲಿ "ಕೇಂದ್ರ ಸರ್ಕಾರದ ಪೂರ್ವ ಸಹಮತಿಯನ್ನು ಪಡೆದು ಆ ಸರ್ಕಾರದ" ಎಂಬ ಪದಗಳಿಗೆ "ಕೇಂದ್ರ ಸರ್ಕಾರದ ಮತ್ತು ರಾಜ್ಯ ಸರ್ಕಾರದ ಸಹಮತಿಯನ್ನು ಪಡೆದು ಕೇಂದ್ರ ಸರ್ಕಾರದ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(2) (ಬಿ) ಖಂಡದಲ್ಲಿ, "ಇತರ ಯಾವುದೇ ಏಜೆನ್ಸಿಯ" ಎಂಬ ಪದಗಳಿಗೆ "ಯಾವೊಬ್ಬ ವ್ಯಕ್ತಿ ಅಥವಾ ಇತರ ಯಾವುದೇ ಏಜೆನ್ಸಿಯ" ಎಂಬ ಪದಗಳನ್ನು 2006ರ ಆಗಸ್ಟ್ ಒಂದನೇ ದಿನಾಂಕದಿಂದ ಜಾರಿಗೆ ಬಂದಿರುವುದಾಗಿ ಪ್ರತಿಯೋಜಿಸಲಾಗಿದೆಯೆಂದು ಭಾವಿಸತಕ್ಕದ್ದು.

(3) "ಪರಂತು" ಎಂಬ ಪದದ ತರುವಾಯ, "ಲೋಕಾಯುಕ್ತನ ಪದವು ಆತನ ಮರಣ, ರಾಜೀನಾಮೆ, ನಿವೃತ್ತಿ, ತೆಗೆದುಹಾಕುವುದು ಅಥವಾ ಅನ್ಯಥಾ ಕಾರಣಗಳಿಂದಾಗಿ ರಿಕ್ತವಾಗಿದ್ದರೆ ಅಥವಾ" ಎಂಬ ಪದಗಳನ್ನು ಸೇರಿಸತಕ್ಕದ್ದು.

**7. ಸಿಂಧುತ್ವ.–** ಯಾವುದೇ ನ್ಯಾಯಾಲಯದ ಯಾವುದೇ ತೀರ್ಪು, ಡಿಕ್ರಿ ಅಥವಾ ಆದೇಶದಲ್ಲಿ ಏನೇ ಒಳಗೊಂಡಿದ್ದರೂ ಈ ಅಧಿನಿಯಮದ ಪ್ರಾರಂಭಕ್ಕೆ ಮೊದಲು ಮೂಲ ಅಧಿನಿಯಮದ ಅಡಿಯಲ್ಲಿ ಕೈಗೊಂಡ ಯಾವುದೇ ಕ್ರಮವನ್ನು ಈ ಅಧಿನಿಯಮದ ಮೂಲಕ ತಿದ್ದುಪಡಿಯಾದ ಮೂಲ ಅಧಿನಿಯಮದ ಅಡಿಯಲ್ಲಿ ಕೈಗೊಳ್ಳಲಾಗಿದೆಯೆಂದು ಭಾವಿಸತಕ್ಕದ್ದು ಮತ್ತು ಅದರ ಮೇಲೆ ಮಾಡಿದ ತನಿಖೆ, ವ್ಯವಹರಣೆಗಳು, ವಿಚಾರಣೆ ಅಥವಾ ಶಿಫಾರಸ್ಸು ಒಳಗೊಂಡಂತೆ ಯಾವುದೇ ಅಂಥ ಕ್ರಮವು, ಅಂಥ ಕ್ರಮವನ್ನು ಕೈಗೊಂಡ ಸಮಯದಲ್ಲಿ ಲೋಕಾಯುಕ್ತರಿಗೆ ಮೂಲ ಅಧಿನಿಯಮದ ಅಡಿ ಅಂಥ ಕ್ರಮ ಕೈಗೊಳ್ಳಲು ಅಧಿಕಾರ ಇರಲಿಲ್ಲವೆಂಬ ಕಾರಣದಿಂದಾಗಿಯೇ ಅಸಿಂಧುವಾಗಿವೇ ಎಂದು ಭಾವಿಸತಕ್ಕದ್ದಲ್ಲ ಮತ್ತು ಮೂಲ ಅಧಿನಿಯಮದ ಅಡಿಯಲ್ಲಿ ಲೋಕಾಯುಕ್ತನು, ಚಲಾಯಿಸಿದ ಯಾವುದೇ ಅಧಿಕಾರ ವ್ಯಾಪ್ತಿಯನ್ನು ಯಾವುದೇ ನ್ಯಾಯಾಲಯದ, ಪ್ರಾಧಿಕಾರದ ಅಥವಾ ನ್ಯಾಯಾಧಿಕರಣದ ಮುಂದೆ ಪ್ರಶ್ನಿಸಿತಕ್ಕದ್ದಲ್ಲ.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಕರ್ನಾಟಕ ಲೋಕಾಯುಕ್ತರು ಹೆಚ್ಚು ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸಲು ಸಾಧ್ಯವಾಗುವಂತೆ ಕರ್ನಾಟಕ ಲೋಕಾಯುಕ್ತ ಅಧಿನಿಯಮ, 1984 ಕ್ಕೆ ಈ ಮುಂದಿನ ತಿದ್ದುಪಡಿಗಳನ್ನು ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ, ಎಂದರೆ:–

(i) ಸರ್ಕಾರದ ಮುಖ್ಯ ಕಾರ್ಯದರ್ಶಿ, ಅಪರ ಮುಖ್ಯ ಕಾರ್ಯದರ್ಶಿ, ಪ್ರಧಾನ ಕಾರ್ಯದರ್ಶಿ, ಕಾರ್ಯದರ್ಶಿ ಅಥವಾ ಕಾರ್ಯದರ್ಶಿ–II ಇವರುಗಳನ್ನು "ಕಾರ್ಯದರ್ಶಿ" ಎಂಬ ಪದದ ಅರ್ಥವ್ಯಾಪ್ತಿಯೊಳಗೆ ಸೇರಿಸುವುದು;

(ii) ಮುಖ್ಯಮಂತ್ರಿ, ಸಚಿವರುಗಳು, ರಾಜ್ಯ ವಿಧಾನಮಂಡಲದ ಸದಸ್ಯರುಗಳು, ಮಂಡಲಿಗಳು, ನಿಗಮಗಳು, ಸರ್ಕಾರದ ಕಂಪನಿಗಳು, ಸಹಕಾರ ಸಂಘಗಳು ಮತ್ತು ಸಂಘಗಳಿಗೆ ಅಧ್ಯಕ್ಷ, ಉಪಾಧ್ಯಕ್ಷ ಅಥವಾ ಸದಸ್ಯನಾಗಿ ರಾಜ್ಯ ಸರ್ಕಾರವು ನಾಮನಿರ್ದೇಶನ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ಮಾಸಿಕವಾಗಿ ಇಪ್ಪತ್ತು ಸಾವಿರ ರೂಪಾಯಿಗಳಿಗಿಂತ ಹೆಚ್ಚಿನ ನಿಗದಿತ ವೇತನ, ಸಂಬಳ ಅಥವಾ ಗೌರವಧನ ಪಡೆಯುವ ಸಾರ್ವಜನಿಕ ನೌಕರರು ಕೈಗೊಂಡ ಕ್ರಮದ ಬಗ್ಗೆ ತಮ್ಮ ಅಭಿಪ್ರಾಯವನ್ನು ದಾಖಲಿಸಿ ತಾವಾಗಿಯೇ ವಿಚಾರಣೆ ನಡೆಸುವುದಕ್ಕೆ ಲೋಕಾಯುಕ್ತರಿಗೆ ಅಧಿಕಾರವನ್ನು ನೀಡುವುದು;

(iii) ಉಪಲೋಕಾಯುಕ್ತರ ಪದವು ಖಾಲಿ ಇದ್ದಾಗ, ಉಪಲೋಕಾಯುಕ್ತರ ಪ್ರಕಾರ್ಯಗಳನ್ನು ಲೋಕಾಯುಕ್ತರು ನಿರ್ವಹಿಸುವುದಕ್ಕೆ ಸಾಧ್ಯವಾಗುವಂತೆ ಮಾಡುವುದು ಮತ್ತು ಅದೇ ರೀತಿಯಾಗಿ ಲೋಕಾಯುಕ್ತರ ಪದವು ಖಾಲಿ ಇದ್ದಾಗ, ಲೋಕಾಯುಕ್ತರ ಪ್ರಕಾರ್ಯಗಳನ್ನು ನಿರ್ವಹಿಸುವುದಕ್ಕಾಗಿ, ಉಪಲೋಕಾಯುಕ್ತರಿಗೆ ಸಾಧ್ಯವಾಗುವಂತೆ ಮಾಡುವುದು;

(iv) ಬಾಧಿತ ವ್ಯಕ್ತಿಯ ಕಾನೂನುಬದ್ಧ ಪ್ರತಿನಿಧಿಗಳು ಫಿರ್ಯಾದನ್ನು ದಾಖಲು ಮಾಡಲು ಅಥವಾ ಈಗಾಗಲೇ ಫಿರ್ಯಾದನ್ನು ಮಾಡಲಾಗಿದ್ದರೆ, ಮುಂದುವರಿಸಲು ಅವಕಾಶ ಮಾಡಿಕೊಡುವುದು;

(v) ಲೋಕಾಯುಕ್ತರು ಮತ್ತು ಉಪಲೋಕಾಯುಕ್ತರು, ಇತರೆ ಯಾವುದೇ ಏಜೆನ್ಸಿಯ ಎಂದರೆ ಯಾವೊಬ್ಬ ವ್ಯಕ್ತಿಯ, ಸೇವೆಯನ್ನು ಬಳಸಿಕೊಳ್ಳಬಹುದು. ಆದರೂ ಇದನ್ನು ಸ್ಪಷ್ಟ ಪಡಿಸುವ ಉದ್ದೇಶದಿಂದ ಲೋಕಾಯುಕ್ತರು ಮತ್ತು ಉಪಲೋಕಾಯುಕ್ತರು ಯಾವೊಬ್ಬ ವ್ಯಕ್ತಿಯ ಸೇವೆಯನ್ನು ಸಹ ಬಳಸಿಕೊಳ್ಳಲು ತಿದ್ದುಪಡಿಯಲ್ಲಿ ಪ್ರಸ್ತಾವಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮದಿಂದಾಗಿ ಯಾವುದೇ ಹೆಚ್ಚಿನ ಆರ್ಥಿಕ ವೆಚ್ಚವುಂಟಾಗುವುದಿಲ್ಲ.

**ಬಿ. ಎಸ್. ಯಡಿಯೂರಪ್ಪ**
ಮುಖ್ಯಮಂತ್ರಿ

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

**ಅನುಬಂಧ**

**ಕರ್ನಾಟಕ ಲೋಕಾಯುಕ್ತ ಅಧಿನಿಯಮ, 1984ರ (1985ರ ಕರ್ನಾಟಕ ಅಧಿನಿಯಮ ಸಂಖ್ಯೆ 4)**

**ಉದ್ಧೃತ ಭಾಗ**

xx xx xx

2. ಪರಿಭಾಷೆಗಳು.- **xx** **xx** **xx**

**(13) "ಕಾರ್ಯದರ್ಶಿ" ಎಂದರೆ ಕರ್ನಾಟಕ ಸರ್ಕಾರದ ಕಾರ್ಯದರ್ಶಿ ಮತ್ತು ಇದರಲ್ಲಿ ವಿಶೇಷ ಕಾರ್ಯದರ್ಶಿ, ಒಬ್ಬ ಅಪರ ಕಾರ್ಯದರ್ಶಿ ಮತ್ತು ಒಬ್ಬ ಸಹ ಕಾರ್ಯದರ್ಶಿಯನ್ನು ಒಳಗೊಳ್ಳುತ್ತದೆ;**

**xx** **xx** **xx**

7. ಲೋಕಾಯುಕ್ತ ಮತ್ತು ಒಬ್ಬ ಉಪಲೋಕಾಯುಕ್ತನು ತನಿಖೆ ಮಾಡಬಹುದಾದ ವಿಷಯಗಳು.- **(1) ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು,-**

(i) ಮುಖ್ಯಮಂತ್ರಿ;

(ii) ಒಬ್ಬ ಮಂತ್ರಿ ಅಥವಾ ಒಬ್ಬ ಕಾರ್ಯದರ್ಶಿ;

(iii) ಒಬ್ಬ ರಾಜ್ಯ ವಿಧಾನಮಂಡಲದ ಸದಸ್ಯ; ಅಥವಾ

(iv) ಇದರ ಪರವಾಗಿ ರಾಜ್ಯ ಸರ್ಕಾರವು ಲೋಕಾಯುಕ್ತನ ಜೊತೆ ಸಮಾಲೋಚನೆ ನಡೆಯಿಸಿ, ಅಧಿಸೂಚಿಸಿದ ಸಾರ್ವಜನಿಕ ನೌಕರರ ವರ್ಗದ ಸಾರ್ವಜನಿಕ ನೌಕರನಾಗಿರುವ ಯಾವೊಬ್ಬ ಇತರ ಸಾರ್ವಜನಿಕ ನೌಕರ; ಕೈಗೊಂಡಂಥ ಅಥವಾ ಅವನ ಸಾಮಾನ್ಯ ಅಥವಾ ವಿಶೇಷ ಅನುಮೋದನೆ ಪಡೆದು ಕೈಗೊಂಡಂಥ ಯಾವುದೇ ಕ್ರಮದ ಕುರಿತು, ಲೋಕಾಯುಕ್ತನು ಅಂಥ ಕ್ರಮದ ಸಂಬಂಧದಲ್ಲಿ ಒಂದು ದೂರು ಅಥವಾ ಆಪಾದನೆಯನ್ನು ಒಳಗೊಂಡ ಫಿರ್ಯಾದನ್ನು ಸಲ್ಲಿಸಲಾದಂಥ ಸಂದರ್ಭದಲ್ಲಿ ಅವನು ಅಂಥ ಕ್ರಮದ ಕುರಿತು ತನಿಖೆ ನಡೆಸಬಹುದು.

(2) ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು ಮುಖ್ಯಮಂತ್ರಿ, ಮಂತ್ರಿ, ರಾಜ್ಯ ವಿಧಾನ ಮಂಡಲದ ಸದಸ್ಯ, ಕಾರ್ಯದರ್ಶಿ ಅಥವಾ (1) ನೇ ಉಪ ಪ್ರಕರಣದಲ್ಲಿ ಉಲ್ಲೇಖಿಸಿದ ಇತರ ಸಾರ್ವಜನಿಕ ನೌಕರನಾಗಿರುವ ಯಾವೊಬ್ಬ ಸಾರ್ವಜನಿಕ ನೌಕರನು ಕೈಗೊಂಡ ಅಥವಾ ಅವನ ಸಾಮಾನ್ಯ ಅಥವಾ ವಿಶೇಷ ಮಂಜೂರಾತಿ ಪಡೆದು ಕೈಗೊಂಡ ಕ್ರಮವನ್ನು ಕುರಿತು ದೂರು ಅಥವಾ ಆಪಾದನೆಯನ್ನು ಒಳಗೊಂಡ ಫಿರ್ಯಾದನ್ನು ಸಲ್ಲಿಸಲಾದಂಥ ಸಂದರ್ಭದಲ್ಲಿ ಅಥವಾ ಅಂಥ ಕ್ರಮವು ಒಂದು ದೂರು ಇಲ್ಲವೇ ಆಪಾದನೆಯ ಕಾರಣ ವಸ್ತುವಾಗಬಹುದು ಅಥವಾ ಆಗಿರಬಹುದಾಗಿತ್ತು ಎಂದು ಲೋಕಾಯುಕ್ತನು ಅಭಿಪ್ರಾಯಪಡುವ ಯಾವುದೇ ಸಂದರ್ಭದಲ್ಲಿ ಉಪಲೋಕಾಯುಕ್ತನು ಅಂಥ ಕ್ರಮದ ಕುರಿತು ತನಿಖೆ ಮಾಡಬಹುದು.

(ಸಿ) ನೈತಿಕ ಅಧ:ಪತನವನ್ನು ಒಳಗೊಳ್ಳುವ ಯಾವುದೇ ಅಪರಾಧಕ್ಕಾಗಿ ಕ್ರಿಮಿನಲ್ ನ್ಯಾಯಾಲಯದಿಂದ ಕಾರಾವಾಸದ ಶಿಕ್ಷೆಯಿಂದ ಶಿಕ್ಷಿಸಲ್ಪಟ್ಟಿದ್ದರೆ;

(ಡಿ) ಪರಿಷತ್ತಿನ ಆದೇಶದ ಮೂಲಕ ಮಾಡಲಾದ ಯಾವುದೇ ಕಾಮಗಾರಿಯಲ್ಲಿ ಅಥವಾ ಅದರ ಪರವಾಗಿ ಮಾಡಿಕೊಂಡ ಯಾವುದೇ ಒಪ್ಪಂದದಲ್ಲಿ, ಸ್ವತ: ಅವನು ಅಥವಾ ಅವನ ಪಾಲುದಾರನು, ನೇರವಾಗಿ ಅಥವಾ ಪರೋಕ್ಷವಾಗಿ ಯಾವುದೇ ಷೇರನ್ನು ಅಥವಾ ಹಿತಾಸಕ್ತಿಯನ್ನು ಹೊಂದಿದ್ದರೆ;

(ಇ) ದುರ್ನಡತೆ ಅಥವಾ ನಿರ್ಲಕ್ಷ್ಯದ ತಪ್ಪಿತಸ್ಥನಾಗಿ ಯಾವುದೇ ಸರ್ಕಾರದ ಅಥವಾ ವಿಶ್ವವಿದ್ಯಾಲಯದ ಸೇವೆಯಿಂದ ತೆಗೆದುಹಾಕಲಾದ ವ್ಯಕ್ತಿಯಾಗಿದ್ದರೆ,

– ಅವನು ಪರಿಷತ್ತಿನ ಸದಸ್ಯನಾಗಿ ನಾಮನಿರ್ದೇಶಿತನಾಗುವುದಕ್ಕೆ ಅಥವಾ ಮುಂದುವರೆಯುವುದಕ್ಕೆ, ಅನರ್ಹನಾಗತಕ್ಕದ್ದು.

(2) ಒಬ್ಬ ವ್ಯಕ್ತಿಯು (1)ನೇ ಉಪ ಪ್ರಕರಣದ ಅಡಿಯಲ್ಲಿ ಅನರ್ಹನಾಗಿರುವನೇ ಎಂಬ ಬಗ್ಗೆ ವಿವಾದ ಅಥವಾ ಸಂದೇಹ ಉಂಟಾದಲ್ಲಿ, ಸರ್ಕಾರದ ತೀರ್ಮಾನವು ಅಂತಿಮವಾಗಿರತಕ್ಕದ್ದು.

(3) ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿದುದನ್ನುಳಿದು, ಕಾನೂನಿನ ಮೂಲಕ ಸ್ಥಾಪಿತವಾದ ಯಾವುದೇ ವಿಶ್ವವಿದ್ಯಾಲಯದ ಪದವೀಧರನಾಗಿರದ ಯಾವೊಬ್ಬ ವ್ಯಕ್ತಿಯು, ಈ ಅಧಿನಿಯಮದ ಅಡಿಯಲ್ಲಿ ಪರಿಷತ್ತಿನ ಸದಸ್ಯನಾಗಿ ನಾಮನಿರ್ದೇಶಿತನಾಗುವುದಕ್ಕೆ ಅರ್ಹನಾಗಿರತಕ್ಕದ್ದಲ್ಲ.

(4) ಈ ಅಧಿನಿಯಮದಲ್ಲಿ ಏನೇ ಇದ್ದರೂ, ಅನ್ಯಥಾ ಉಪಬಂಧಿಸಿದುದನ್ನುಳಿದು, ವಿಶ್ವವಿದ್ಯಾಲಯದ ಬೋಧಕ ಮತ್ತು ಬೋಧಕೇತರ ಅಥವಾ ಲಿಪಿಕ ವರ್ಗದ ಯಾವೊಬ್ಬ ನೌಕರನು, ಅಥವಾ ಯಾವುದೇ ಸಾಮರ್ಥ್ಯದಿಂದ ಸಂಯೋಜಿತ ಕಾಲೇಜಿನ ವ್ಯವಸ್ಥಾಪನೆಯಲ್ಲಿರುವ ಯಾವೊಬ್ಬ ವ್ಯಕ್ತಿಯು, ಈ ಅಧಿನಿಯಮದಡಿಯಲ್ಲಿ ಪರಿಷತ್ತಿನ ಸದಸ್ಯನಾಗಿ ನಾಮನಿರ್ದೇಶಿತನಾಗುವುದಕ್ಕೆ ಅರ್ಹನಾಗಿರತಕ್ಕದ್ದಲ್ಲ.

**5. ಪರಿಷತ್ತಿನ ಅಧಿಕಾರಗಳು ಮತ್ತು ಪ್ರಕಾರ್ಯಗಳು.–** ಪರಿಷತ್ತಿನ ಅಧಿಕಾರಗಳು ಮತ್ತು ಪ್ರಕಾರ್ಯಗಳ ಈ ಮುಂದಿನಂತೆ ಇರತಕ್ಕದ್ದು, ಎಂದರೆ:–

**ಎ. ಸಾಮಾನ್ಯ ಪ್ರಕಾರ್ಯಗಳು:–**

(i) ಇದು, ಸರ್ಕಾರ, ವಿಶ್ವವಿದ್ಯಾಲಯಗಳು ಹಾಗೂ ರಾಜ್ಯದಲ್ಲಿನ ಇತರೆ ಉನ್ನತ ಶಿಕ್ಷಣ ಸಂಸ್ಥೆಗಳಿಗೆ ಸಲಹೆಯನ್ನು ನೀಡತಕ್ಕದ್ದು;

(ii) ಇದು, ಸರ್ಕಾರ, ವಿಶ್ವವಿದ್ಯಾಲಯಗಳು ಹಾಗೂ ರಾಜ್ಯದೊಳಗಿರುವ ಉನ್ನತ ಶಿಕ್ಷಣದ ಅತ್ಯುನ್ನತ ನಿಯಂತ್ರಣ ಏಜೆನ್ಸಿಗಳು ವಹಿಸುವ ಪಾತ್ರಗಳಲ್ಲಿ ಸಮನ್ವಯಗೊಳಿಸತಕ್ಕದ್ದು;

(iii) ಇದು, ತಾನಾಗಿಯೇ ಆಗಲಿ ಅಥವಾ ಸರ್ಕಾರದಿಂದ ಬಂದ ಸಲಹೆಗಳನ್ನು ಅಥವಾ ರಾಜ್ಯದಲ್ಲಿನ ವಿಶ್ವವಿದ್ಯಾಲಯಗಳು ಅಥವಾ ಇತರೆ ಸಂಸ್ಥೆಗಳಿಂದ ಬಂದ ಕೋರಿಕೆಗಳ ಮೇಲೆ ಉನ್ನತ ಶಿಕ್ಷಣದ ಅಭಿವೃದ್ಧಿಗಾಗಿ ಹೊಸ ಪರಿಕಲ್ಪನೆಗಳನ್ನು, ಕಾರ್ಯಕ್ರಮಗಳನ್ನು ಹಾಗೂ ದೂರದೃಷ್ಟಿ ಯೋಜನೆಗಳನ್ನು ವಿಕಾಸಗೊಳಿಸತಕ್ಕದ್ದು;

(iv) ಇದು, ರಾಷ್ಟ್ರೀಯ ನಿಯಂತ್ರಣ ಏಜೆನ್ಸಿಗಳ ನೆರವಿನೊಂದಿಗೆ ರಾಜ್ಯದಲ್ಲಿಯ ವಿಶ್ವವಿದ್ಯಾಲಯಗಳು ಹಾಗೂ ಕಾಲೇಜುಗಳು ಕೈಗೊಂಡ ಅಭಿವೃದ್ಧಿಯ ಕಾರ್ಯಕ್ರಮಗಳ ಅನುಷ್ಠಾನದ ಪ್ರಗತಿಯ ಮೇಲ್ವಿಚಾರಣೆ ನಡೆಸತಕ್ಕದ್ದು;

(v) ಇದು, ಶೈಕ್ಷಣಿಕ ಸಂಸ್ಥೆಗಳ ನಡುವೆ ಸಹಕಾರ ಮತ್ತು ಸಮನ್ವಯವನ್ನು ಹೆಚ್ಚಿಸತಕ್ಕದ್ದು ಹಾಗೂ ಕೈಗಾರಿಕೆ ಮತ್ತು ಇತರೆ ಸಂಬಂಧಪಟ್ಟ ಉದ್ಯಮ ಸಂಸ್ಥೆಗಳೊಂದಿಗಿನ ಪರಸ್ಪರ ಕಾರ್ಯನಿರ್ವಹಣೆಗಾಗಿ ಅವಕಾಶಗಳನ್ನು ಪರಿಶೋಧಿಸತಕ್ಕದ್ದು;

(vi) ಇದು, ಸ್ವಯಂ–ಮೌಲ್ಯಮಾಪನ ಮಾಡುವ ಹಾಗೂ ತನ್ನ ಕಾರ್ಯನಿರ್ವಹಣೆಯ ವಿವರಗಳನ್ನು ತೋರಿಸುವ ವಾರ್ಷಿಕ ವರದಿಯನ್ನು ಸಿದ್ಧಪಡಿಸತಕ್ಕದ್ದು;

(vii) ಇದು, ರಾಜ್ಯದಲ್ಲಿನ ವಿಶ್ವವಿದ್ಯಾಲಯಗಳು ಮತ್ತು ಉನ್ನತ ಶಿಕ್ಷಣದ ಇತರೆ ಸಂಸ್ಥೆಗಳ ಶೈಕ್ಷಣಿಕ ಹಾಗೂ ಹಣಕಾಸಿನ ಹೊಣೆಗಾರಿಕೆಯ ಕ್ರಮಗಳನ್ನು ಸಲಹೆ ಮಾಡತಕ್ಕದ್ದು;

(viii) ಇದು, ನಿಯಮಿಸಬಹುದಾದಂಥ ರೀತಿಯಲ್ಲಿ ವಾರ್ಷಿಕ ಆಯವ್ಯಯವನ್ನು ಹಾಗೂ ಲೆಕ್ಕ ಪರಿಶೋಧಿತ ವೆಚ್ಚ ವಿವರ ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು.

**(ಬಿ) ಶೈಕ್ಷಣಿಕ ಪ್ರಕಾರ್ಯಗಳು.–**

(i) ಇದು, ವಿಶ್ವವಿದ್ಯಾಲಯಗಳು ಹಾಗೂ ಕಾಲೇಜುಗಳಲ್ಲಿನ ಪಠ್ಯವಿಷಯಗಳನ್ನು ಅಭಿವೃದ್ಧಿಪಡಿಸುವಲ್ಲಿ, ವ್ಯಾಸಂಗ ಕ್ರಮಗಳನ್ನು ಪುನರ್ ವಿನ್ಯಾಸಗೊಳಿಸುವಲ್ಲಿ ಹಾಗೂ ಪಠ್ಯ ವಿಷಯವನ್ನು ಇಂದೀಕರಿಸುವಲ್ಲಿ ಹೊಸ ಪ್ರಯೋಗಗಳನ್ನು ಮಾಡಲು ಪ್ರೋತ್ಸಾಹಿಸತಕ್ಕದ್ದು ಹಾಗೂ ಮೇಲ್ದರ್ಜೆಗೇರಿಸತಕ್ಕದ್ದು;

(ii) ಇದು, ಸ್ವಾಯತ್ತ ಕಾಲೇಜುಗಳ ಕಾರ್ಯಕ್ರಮಗಳನ್ನು ಸಮನ್ವಯಗೊಳಿಸತಕ್ಕದ್ದು ಮತ್ತು ಅವುಗಳ ಅನುಷ್ಠಾನದ ಮೇಲ್ವಿಚಾರಣೆಯನ್ನು ಮಾಡತಕ್ಕದ್ದು;

(iii) ಇದು, ವಿಶ್ವವಿದ್ಯಾಲಯಗಳು ನಡೆಸುವ ಪರೀಕ್ಷೆಗಳ ಗುಣಮಟ್ಟಗಳನ್ನು ಸುಧಾರಿಸುವುದಕ್ಕೆ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು ಹಾಗೂ ಅವಶ್ಯಕ ಸುಧಾರಣೆಗಳನ್ನು ಸಲಹೆ ಮಾಡತಕ್ಕದ್ದು.

(iv) ಇದು, ವಿಶ್ವವಿದ್ಯಾಲಯಗಳು ಹಾಗೂ ಕಾಲೇಜುಗಳಲ್ಲಿನ ಅಧ್ಯಾಪಕರ ತರಬೇತಿಗೆ ಅವಕಾಶ ಕಲ್ಪಿಸತಕ್ಕದ್ದು;

(v) ಇದು, ಗುಣಮಟ್ಟದ ಪಠ್ಯ ಪುಸ್ತಕಗಳು, ಮೋನೋಗ್ರಾಫ್‌ಗಳು ಹಾಗೂ ಪರಾಮರ್ಶನ ಗ್ರಂಥಗಳ ಪ್ರಕಟಣೆಯನ್ನು ಹೆಚ್ಚಿಸತಕ್ಕದ್ದು ಹಾಗೂ ಮೇಲ್ವಿಚಾರಣೆ ಮಾಡತಕ್ಕದ್ದು.

(vi) ಇದು, ಹೆಚ್ಚಿನ ಶೈಕ್ಷಣಿಕ ಸಹಕಾರ ಹಾಗೂ ವಿಶ್ವವಿದ್ಯಾಲಯ ಹಾಗೂ ಕಾಲೇಜು ಅಧ್ಯಾಪಕರ ನಡುವೆ ಪರಸ್ಪರ ಚರ್ಚೆಗೆ ಹಾಗೂ ರಾಜ್ಯದ ಒಳಗೆ ಹಾಗೂ ಹೊರಗೆ, ವಿದ್ಯಾರ್ಥಿಗಳು ಹಾಗೂ ಅಧ್ಯಾಪಕರು ದೊರೆಯುವಂತೆ ಸೌಲಭ್ಯ ಕಲ್ಪಿಸುವುದಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ಅಭಿವೃದ್ಧಿಪಡಿಸತಕ್ಕದ್ದು.

(vii) ಇದು, ವಿಶ್ವವಿದ್ಯಾಲಯಗಳಲ್ಲಿ, ಕಾಲೇಜುಗಳಲ್ಲಿ ಮತ್ತು ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶದ ನಿಯಂತ್ರಣದ ಬಗ್ಗೆ ಸಲಹೆ ನೀಡತಕ್ಕದ್ದು.

(viii) ಇದು, ವಿಶ್ವವಿದ್ಯಾಲಯಗಳಲ್ಲಿ ಹಾಗೂ ಕಾಲೇಜುಗಳಲ್ಲಿ ಕ್ರೀಡೆಗಳು, ಆಟಗಳು, ದೈಹಿಕ ಶಿಕ್ಷಣ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳನ್ನು ಪ್ರೋತ್ಸಾಹಿಸತಕ್ಕದ್ದು.

(ix) ಇದು, ವಿವಿಧ ವ್ಯಾಸಂಗಕ್ರಮಗಳಿಗೆ ಪ್ರವೇಶವನ್ನು ನಿಯಂತ್ರಿಸುವುದಕ್ಕಾಗಿ ಮತ್ತು ವಿಶ್ವವಿದ್ಯಾಲಯಗಳು, ಕಾಲೇಜುಗಳು ಹಾಗೂ ಉನ್ನತ ಶಿಕ್ಷಣದ ಇತರೆ ಸಂಸ್ಥೆಗಳಲ್ಲಿ ಅಧ್ಯಾಪಕರು ಹಾಗೂ ಅಧ್ಯಾಪಕೇತರ ಆಡಳಿತಗಾರರ ಹುದ್ದೆಗಳಿಗೆ ನೇಮಕ ಮಾಡಿಕೊಳ್ಳುವುದಕ್ಕಾಗಿ ಈಗಿರುವ ಮಾರ್ಗಸೂಚಿಗಳನ್ನು ಮತ್ತು ಒದಗಿಸಿರುವ ಶಿಫಾರಸುಗಳನ್ನು ನಿಯತಕಾಲಿಕವಾಗಿ ಪುನರ್ ಪರಿಶೀಲಿಸತಕ್ಕದ್ದು.

(x) ಇದು, ರಾಜ್ಯದಲ್ಲಿನ ವಿಶ್ವವಿದ್ಯಾಲಯಗಳು ಹಾಗೂ ಕಾಲೇಜುಗಳ ಕಾರ್ಯನಿರ್ವಹಣೆಯ ಸ್ಥೂಲ ಸಮೀಕ್ಷಾ ವರದಿಯನ್ನು ಸಿದ್ಧಪಡಿಸತಕ್ಕದ್ದು ಮತ್ತು ಅದರ ಒಂದು ಪ್ರತಿಯನ್ನು ಸರ್ಕಾರಕ್ಕೆ ಮತ್ತು ಸರ್ಕಾರವು ನಿರ್ದಿಷ್ಟಪಡಿಸಬಹುದಾದ ಅಂಥ ಇತರ ಪ್ರಾಧಿಕಾರಗಳಿಗೆ ಒದಗಿಸತಕ್ಕದು.

(xi) ಇದು, ಉನ್ನತ ಶಿಕ್ಷಣದಲ್ಲಿ ಸಮಾನತೆ ಹಾಗೂ ಹಿರಿಮೆ, ಈ ಅವಳಿ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ಇತರ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು.

**(ಸಿ) ಸಲಹಾ ಪ್ರಕಾರ್ಯಗಳು:–**

(1) ಇದು, ಸರ್ಕಾರಕ್ಕೆ,–

(i) ವಿಶ್ವವಿದ್ಯಾಲಯಗಳಲ್ಲಿ ಹಾಗೂ ಕಾಲೇಜುಗಳಲ್ಲಿ ಈಗಿರುವ ಹೆಚ್ಚು ವಿಷಯಗಳು ಹಾಗೂ ವಿಭಾಗಗಳಲ್ಲದೇ, ಹೊಸ ವಿಶ್ವವಿದ್ಯಾಲಯಗಳು ಹಾಗೂ ಕಾಲೇಜುಗಳ ಸ್ಥಾಪನೆಗೆ ಸಂಬಂಧಿಸಿದ ಯಾವುವೇ ಮಾನದಂಡಗಳಿದ್ದರೆ ಅವುಗಳನ್ನು;

(ii) ರಾಜ್ಯದಲ್ಲಿ ವಿಶ್ವವಿದ್ಯಾಲಯಗಳ ಪರಿನಿಯಮಗಳು, ಅಧ್ಯಾದೇಶಗಳು ಹಾಗೂ ವಿನಿಯಮಗಳಿಗೆ ಸಂಬಂಧಿಸಿದಂತೆ ಶೈಕ್ಷಣಿಕ ಧ್ಯೇಯಗಳಿಗಾಗಿನ ಸ್ವಾಯತ್ತತೆಗೆ ಬಾಧಕವಾಗದಂತೆ ಆಡಳಿತದಲ್ಲಿ ಏಕರೂಪತೆಯನ್ನು ಕಾಯ್ದುಕೊಂಡು ಅಗತ್ಯವಿರುವೆಡೆಗಳಲ್ಲೆಲ್ಲಾ ಮಾರ್ಪಾಡುಗಳನ್ನು;

(iii) ಯಾವುದೇ ವಿಶ್ವವಿದ್ಯಾಲಯ, ಕಾಲೇಜು ಅಥವಾ ಉನ್ನತ ಶಿಕ್ಷಣ ಸಂಸ್ಥೆಯ ಬಗ್ಗೆ ಅಥವಾ ಪರಿಷತ್ತಿಗೆ ಉಲ್ಲೇಖಿಸಬಹುದಾದ ಉನ್ನತ ಶಿಕ್ಷಣ ಹಾಗೂ ಸಂಶೋಧನೆಗೆ ಸಂಬಂಧಿಸಿದ ಯಾವುದೇ ಇತರ ವಿಷಯವನ್ನು;

(iv) ವಿಭಾಗ ನಿರ್ವಹಣಾ ಅನುದಾನಗಳನ್ನು ನಿರ್ಧರಿಸುವಲ್ಲಿ ಮತ್ತು ಅಂಥ ಅನುದಾನಗಳಿಗಾಗಿ ಆಧಾರಗಳನ್ನು ವಿಧಿಸುವಲ್ಲಿ,

- ಸಲಹೆಗಳನ್ನು ನೀಡತಕ್ಕದ್ದು.

(2) ಇದು ರಾಜ್ಯದಲ್ಲಿ ಉನ್ನತ ಶಿಕ್ಷಣದ ಮುಂದುವರಿಕೆಗಾಗಿ ಅವಶ್ಯಕವಾದ ಇತರ ಯಾವುವೇ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

**(ಡಿ) ಪರಿಷತ್ತಿನ ಅಧಿಕಾರಗಳು:–**

(i) ಇದು, ವಿವಿಧ ಕಾರ್ಯಕ್ರಮಗಳನ್ನು ಒಳಗೊಂಡ ಕಾರ್ಯನೀತಿಗಳ ಅನುಷ್ಠಾನಕ್ಕಾಗಿ ದೂರದೃಷ್ಟಿ ಯೋಜನೆಯನ್ನು ಸಿದ್ಧಪಡಿಸತಕ್ಕದ್ದು ಮತ್ತು ಅಂಥ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವುದಕ್ಕಾಗಿ ಆದ್ಯತೆಗಳನ್ನು ನಿರ್ಧರಿಸತಕ್ಕದ್ದು;

(ii) ಇದು, ಸರ್ಕಾರವು ವಿಶ್ವವಿದ್ಯಾಲಯಗಳು ಹಾಗೂ ಉನ್ನತ ಶಿಕ್ಷಣದ ಇತರ ಸಂಸ್ಥೆಗಳಿಗೆ ಅನುದಾನಗಳನ್ನು ಬಿಡುಗಡೆ ಮಾಡುವುದಕ್ಕಾಗಿ ಸಾಮಾನ್ಯ ಮಾರ್ಗಸೂಚಿಗಳನ್ನು ಪ್ರಸ್ತಾಪಿಸತಕ್ಕದ್ದು ಹಾಗೂ ಪ್ರತಿಯೊಂದು ವಿಶ್ವಾವಿದ್ಯಾಲಯಕ್ಕೆ ಹಾಗೂ ಉನ್ನತ ಶಿಕ್ಷಣದ ಇತರ ಸಂಸ್ಥೆಗಳಿಗೆ ಅಂಥ ಅನುದಾನಗಳ ಬಿಡುಗಡೆ ಕುರಿತಂತೆ ಸರ್ಕಾರಕ್ಕೆ ಸಲಹೆ ನೀಡತಕ್ಕದ್ದು;

(iii) ಇದು, ಕಾರ್ಯನಿರ್ವಾಹಕ ಸಮಿತಿಯು ತನ್ನ ಉದ್ದೇಶಗಳಿಗನುಸಾರವಾಗಿ ಪರಿಣಾಮಕಾರಿಯಾಗಿ ಪ್ರಕಾರ್ಯನಿರ್ವಹಿಸುವುದಕ್ಕಾಗಿ ಅವಶ್ಯವಾಗಬಹುದಾದಂಥ ನಿರ್ದೇಶನಗಳನ್ನು ನೀಡತಕ್ಕದ್ದು;

(iv) ಇದು, ಈ ಅಧಿನಿಯಮ ಮತ್ತು ಇದರಡಿಯಲ್ಲಿ ರಚಿಸಿದ ನಿಯಮಗಳಿಗನುಸಾರವಾಗಿ ವಿನಿಯಮಗಳನ್ನು ರಚಿಸತಕ್ಕದ್ದು;

(v) ಇದು, ಈ ಅಧಿನಿಯಮದ ಉದ್ದೇಶಗಳ ಮುಂದುವರಿಕೆಗಾಗಿ ಕಾರ್ಯಕ್ರಮಗಳ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಗೊತ್ತುಪಡಿಸಬಹುದಾದಂಥ ಇತರ ಅಧಿಕಾರಗಳನ್ನು ಹೊಂದಿರತಕ್ಕದ್ದು.

**6. ಅಧ್ಯಕ್ಷ.–** ಅಧ್ಯಕ್ಷರು, ಪರಿಷತ್ತಿನ ವ್ಯವಹಾರಗಳಿಗೆ ಸಂಬಂಧಿಸಿದ ಯಾವುದೇ ವಿಷಯವನ್ನು ಕುರಿತಂತೆ ವರದಿಯನ್ನು ತರಿಸಿಕೊಳ್ಳಲು ಹಾಗೂ ಪರಿಷತ್ತಿನ ಕಾರ್ಯನಿರ್ವಹಣೆಯ ಸುಧಾರಣೆಗಾಗಿ ಸಲಹೆಗಳನ್ನು ನೀಡಲು ಹಕ್ಕನ್ನು ಹೊಂದಿರತಕ್ಕದ್ದು.

(2) ಅಧ್ಯಕ್ಷರು, ಪರಿಷತ್ತಿನ ಹಾಗೂ ಕಾರ್ಯನಿರ್ವಾಹಕ ಸಮಿತಿಯ ಸಭೆಗಳ ಅಧ್ಯಕ್ಷತೆ ವಹಿಸತಕ್ಕದ್ದು.

**7. ಉಪಾಧ್ಯಕ್ಷ.–** ಉಪಾಧ್ಯಕ್ಷರು, ಅಧ್ಯಕ್ಷರ ಗೈರುಹಾಜರಿಯಲ್ಲಿ ಪರಿಷತ್ತಿನ ಅಥವಾ ಕಾರ್ಯ ನಿರ್ವಾಹಕ ಸಮಿತಿಯ ಸಭೆಗಳ ಅಧ್ಯಕ್ಷತೆ ವಹಿಸತಕ್ಕದ್ದು.

(2) ಉಪಾಧ್ಯಕ್ಷರು, ಗೊತ್ತುಪಡಿಸಬಹುದಾದಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಇತರ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು.

(3) ಉಪಾಧ್ಯಕ್ಷರನ್ನು ಅಥವಾ ಪದನಿಮಿತ್ತ ಸದಸ್ಯರನ್ನು ಹೊರತುಪಡಿಸಿದ ಯಾವೊಬ್ಬ ಇತರ ಸದಸ್ಯರನ್ನು, ಸಾಮಾನ್ಯವಾಗಿ ಐದು ವರ್ಷಗಳ ಅವಧಿಗಾಗಿ ಸರ್ಕಾರವು ನೇಮಕ ಮಾಡತಕ್ಕದ್ದು ಹಾಗೂ ಎರಡನೇ ಅವಧಿಯ ಮರುನೇಮಕಕ್ಕೆ ಇವರು ಅರ್ಹರಾಗಿರತಕ್ಕದ್ದಲ್ಲ:

ಪರಂತು, ಎಪ್ಪತ್ತು ವರ್ಷಗಳ ವಯಸ್ಸು ಆಗಿರದ ವ್ಯಕ್ತಿಯು, ಉಪಾಧ್ಯಕ್ಷರಾಗಿ ನೇಮಕವಾಗಲು ಅರ್ಹರಾಗಿರತಕ್ಕದ್ದು.

**8. ಕಾರ್ಯನಿರ್ವಾಹಕ ನಿರ್ದೇಶಕ.–** (1) ರಾಜ್ಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಿರದ, ಸೇವೆಯಲ್ಲಿರುವ ಅಥವಾ ನಿವೃತ್ತರಾಗಿರುವ ಹಿರಿಯ ಆಡಳಿತಾಧಿಕಾರಿಗಳು, ಶಿಕ್ಷಣ ಕ್ಷೇತ್ರದಲ್ಲಿ ಆಸಕ್ತಿ ಹಾಗೂ ಅನುಭವವನ್ನು ಹೊಂದಿರುವ ಅಥವಾ ಕುಲಪತಿಗಳಾಗಿರುವ ಅಥವಾ ಆಗಿದ್ದ ಅಥವಾ ಹತ್ತು ವರ್ಷಗಳಿಗಿಂತ ಕಡಿಮೆಯಿಲ್ಲದ ಅನುಭವವಿರುವ ಪ್ರಾಧ್ಯಾಪಕರನ್ನು, ಪರಿಷತ್ತಿನ ಕಾರ್ಯನಿರ್ವಾಹಕ ನಿರ್ದೇಶಕರನ್ನಾಗಿ ಸರ್ಕಾರವು ನೇಮಕ ಮಾಡತಕ್ಕದ್ದು.

(2) ಸರ್ಕಾರವು ಕಾರ್ಯ ನಿರ್ವಾಹಕ ನಿರ್ದೇಶಕನನ್ನು ಸಾಮಾನ್ಯವಾಗಿ ಐದು ವರ್ಷಗಳ ಅವಧಿಗಾಗಿ ನೇಮಕ ಮಾಡತಕ್ಕದ್ದು ಹಾಗೂ ಎರಡನೇ ಅವಧಿಗಾಗಿ ಮರು ನೇಮಕಕ್ಕೆ ಅರ್ಹನಾಗಿರತಕ್ಕದ್ದಲ್ಲ:

ಪರಂತು, ಅರವತ್ತೈದು ವರ್ಷಗಳ ವಯಸ್ಸು ಆಗಿರದ ವ್ಯಕ್ತಿಯು, ಕಾರ್ಯನಿರ್ವಾಹಕ ನಿರ್ದೇಶಕನಾಗಿ ನೇಮಕವಾಗಲು ಅರ್ಹನಾಗಿರುತ್ತಾನೆ.

(3) ಕಾರ್ಯನಿರ್ವಾಹಕ ನಿರ್ದೇಶಕನು, ಕಾರ್ಯನಿರ್ವಾಹಕ ಅಧಿಕಾರಿಯಾಗಿರತಕ್ಕದ್ದು ಹಾಗೂ ಪರಿಷತ್ತಿನ ಪ್ರಕಾರ್ಯಗಳ ಸಮನ್ವಯಕ್ಕೆ ಹೊಣೆಗಾರನಾಗಿರತಕ್ಕದ್ದು.

(4) ಕಾರ್ಯನಿರ್ವಾಹಕ ನಿರ್ದೇಶಕನು ನಿಯಮಿಸಬಹುದಾದ ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

**9. ಪರಿಷತ್ತಿನ ಪದಾವಧಿ.–** ಪರಿಷತ್ತಿನ ಪದಾವಧಿಯು, ಐದು ವರ್ಷಗಳಾಗಿರತಕ್ಕದ್ದು. ಸರ್ಕಾರವು ಪರಿಷತ್ತನ್ನು ಪ್ರತಿ ಐದು ವರ್ಷಗಳಿಗೆ ಒಮ್ಮೆ ಪುನರ್‌ರಚಿಸತಕ್ಕದ್ದು:

ಪರಂತು, ಹೊಸ ಪರಿಷತ್ತಿನ ರಚನೆಯಲ್ಲಿ ವಿಳಂಬವಾದ ಸಂದರ್ಭದಲ್ಲಿ, ಅಸ್ತಿತ್ವದಲ್ಲಿರುವ ಪರಿಷತ್ತನ್ನೇ ಅವಧಿಯು ಮುಕ್ತಾಯವಾದ ದಿನಾಂಕದಿಂದ ಆರು ತಿಂಗಳ ಅವಧಿಗಾಗಿ ಅಥವಾ ಹೊಸ ಪರಿಷತ್ತಿನ ರಚನೆಯಾಗುವವರೆಗೆ, ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸತಕ್ಕದ್ದು.

**10. ಪರಿಷತ್ತಿನ ಸಭೆಗಳು.–** (1) ಪರಿಷತ್ತು ವಿನಿಯಮಗಳಲ್ಲಿ ಉಪಬಂಧಿಸಿದ ಅಂಥ ಸಮಯ ಮತ್ತು ಸ್ಥಳದಲ್ಲಿ ಅವಶ್ಯಕವಾಗಬಹುದಾದಷ್ಟು ಸಲ ಸಭೆ ಸೇರತಕ್ಕದ್ದು ಮತ್ತು ಅಂಥ ಕಾರ್ಯವಿಧಾನವನ್ನು ಪಾಲಿಸತಕ್ಕದ್ದು, ಆದರೆ ವರ್ಷದಲ್ಲಿ ಕನಿಷ್ಠ ಎರಡು ಸಲವಾದರೂ ಸಭೆ ಸೇರತಕ್ಕದ್ದು.

(2) ಅದರ ಸದಸ್ಯತ್ವದಲ್ಲಿ ಯಾವುದೇ ಖಾಲಿ ಸ್ಥಾನ ಅಥವಾ ಅದರ ರಚನೆಯಲ್ಲಿ ಯಾವುದೇ ದೋಷವಿದ್ದಾಗ್ಯೂ ಅದು ಕಾರ್ಯ ನಿರ್ವಹಿಸಲು ಅಧಿಕಾರವನ್ನು ಹೊಂದಿರತಕ್ಕದ್ದು ಮತ್ತು ಸದಸ್ಯನಾಗಲು ಹಕ್ಕುಳ್ಳವನಾಗಿಲ್ಲದ ವ್ಯಕ್ತಿಯು ಪರಿಷತ್ತಿನ ನಡವಳಿಗಳಲ್ಲಿ ಹಾಜರಾಗಿದ್ದಾಗ್ಯೂ ಅಥವಾ ಅನ್ಯಥಾ ಭಾಗವಹಿಸಿದ್ದಾಗ್ಯೂ ಪರಿಷತ್ತಿನ ನಡವಳಿಗಳು ಸಿಂಧುವಾಗಿರತಕ್ಕದ್ದು.

(3) ಅಧ್ಯಕ್ಷರ ಸಲಹೆಯ ಮೇಲೆ ಪರಿಷತ್ತಿನ ಸಭೆಯನ್ನು ಕಾರ್ಯನಿರ್ವಾಹಕ ನಿರ್ದೇಶಕನು ನಡೆಸತಕ್ಕದ್ದು.

(4) ಪರಿಷತ್ತಿನ ಸಭೆಯ ಕೋರಂ, ಪರಿಷತ್ತಿನ ಒಟ್ಟು ಸದಸ್ಯರ ಮೂರನೇ ಒಂದರಷ್ಟು ಆಗಿರತಕ್ಕದ್ದು. ಸಭೆಯ ನಿರ್ಣಯಗಳನ್ನು, ಸಭೆಯಲ್ಲಿ ಹಾಜರಿದ್ದು ಮತ ಚಲಾಯಿಸುವ ಸದಸ್ಯರ ಸರಳ ಬಹುಮತದಿಂದ ತೆಗೆದುಕೊಳ್ಳಬಹುದು.

**11. ಉಪಾಧ್ಯಕ್ಷ, ಕಾರ್ಯನಿರ್ವಾಹಕ ನಿರ್ದೇಶಕ ಹಾಗೂ ಸದಸ್ಯರ ನಿಬಂಧನೆಗಳು ಮತ್ತು ಷರತ್ತುಗಳು.–** (1) ಉಪಾಧ್ಯಕ್ಷ, ಕಾರ್ಯನಿರ್ವಾಹಕ ನಿರ್ದೇಶಕ ಅಥವಾ ಯಾವೊಬ್ಬ ಸದಸ್ಯನು ಅಧ್ಯಕ್ಷರಿಗೆ ತಾನು ಸ್ವತ: ಸಹಿ ಮಾಡಿದ ಪತ್ರ ಬರೆದು, ಪರಿಷತ್ತಿನ ತನ್ನ ಸದಸ್ಯತ್ವಕ್ಕೆ ರಾಜೀನಾಮೆ ನೀಡಬಹುದು:

ಪರಂತು, ಆತನ ರಾಜೀನಾಮೆಯನ್ನು ಅಂಗೀಕರಿಸಿ ಲಿಖಿತವಾಗಿ ತಿಳಿಸುವವರೆಗೆ ತನ್ನ ಪದದಲ್ಲಿಯೇ ಮುಂದುವರೆಯತಕ್ಕದ್ದು.

(2) ವಿಶ್ವವಿದ್ಯಾಲಯದ ಕುಲಪತಿಗಳಿಗೆ ಸಂದಾಯ ಮಾಡುವಷ್ಟೇ ಸಂಬಳಗಳು, ಭತ್ಯೆಗಳು ಹಾಗೂ ಇತರ ಉಪಲಬ್ಧಿಗಳನ್ನು ಉಪಾಧ್ಯಕ್ಷರಿಗೆ ಸಂದಾಯ ಮಾಡತಕ್ಕದ್ದು.

(3) ಕಾರ್ಯನಿರ್ವಾಹಕ ನಿರ್ದೇಶಕನಿಗೆ ಸಂದಾಯ ಮಾಡುವ ಸಂಬಳಗಳು ಹಾಗೂ ಭತ್ಯೆಗಳು, ಸರ್ಕಾರದ ಪ್ರಧಾನ ಕಾರ್ಯದರ್ಶಿಗೆ ಸಂದಾಯ ಮಾಡುವ ಸಂಬಳಗಳು ಹಾಗೂ ಭತ್ಯೆಗಳಿಗೆ ಸಮಾನವಾಗಿರತಕ್ಕದ್ದು. ಆತನು ನಿವೃತ್ತ ಅಧಿಕಾರಿಯಾಗಿದ್ದಲ್ಲಿ ಆತನ ಸಂಬಳವನ್ನು, ಆತನ ನಿವೃತ್ತಿ ವೇತನ ಮತ್ತು ಡಿಸಿಆರ್‌ಜಿಯಷ್ಟರ ಮಟ್ಟಿಗೆ ಕಡಿಮೆಮಾಡತಕ್ಕದ್ದು. ಸೇವಾನಿರತ ಅಧಿಕಾರಿಯನ್ನು ನೇಮಕ ಮಾಡಿಕೊಂಡಿದ್ದಲ್ಲಿ, ಆತನು ಯಾವುದೇ ಸಂಬಳ ಅಥವಾ ಭತ್ಯೆಗಳಿಗೆ ಹಕ್ಕುಳ್ಳವನಾಗಿರತಕ್ಕದ್ದಲ್ಲ.

(4) ಸರ್ಕಾರದ ಇಚ್ಛೆಗೆ ಒಳಪಟ್ಟು, ಅಧಿಕಾರೇತರ ಸದಸ್ಯರು, ಐದು ವರ್ಷಗಳ ಅವಧಿಗೆ ಅಥವಾ ಆತನು ಪ್ರತಿನಿಧಿಸುವ ಸಂಸ್ಥೆಯ ಪದಾವಧಿಯು ಮುಗಿಯುವವರೆಗೆ, ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಪದಧಾರಣ ಮಾಡತಕ್ಕದ್ದು.

(5) ಅಧಿಕಾರೇತರ ಸದಸ್ಯರು, ಗೊತ್ತುಪಡಿಸಬಹುದಾದ ಅಂಥ ಪ್ರಯಾಣಭತ್ಯೆ, ದಿನಭತ್ಯೆ ಮತ್ತು ಉಪವೇಶನ ಶುಲ್ಕಕ್ಕೆ ಅರ್ಹರಾಗಿರತಕ್ಕದ್ದು.

(6) ಈ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ಉಪಾಧ್ಯಕ್ಷ, ಕಾರ್ಯನಿರ್ವಾಹಕ ನಿರ್ದೇಶಕ ಹಾಗೂ ಸದಸ್ಯರ ಸೇವೆಯು ಇತರ ನಿಬಂಧನೆಗಳು ಹಾಗೂ ಷರತ್ತುಗಳು ಗೊತ್ತುಪಡಿಸಬಹುದಾದಂತೆ ಇರತಕ್ಕದ್ದು.

**12. ಪರಿಷತ್ತಿನ ಸದಸ್ಯತ್ವದಿಂದ ತೆಗೆದುಹಾಕುವುದು.–** (1) ಯಾವುದೇ ಸಮಯದಲ್ಲಿ, ನೇಮಕಗೊಂಡ ಅಥವಾ ನಾಮ ನಿರ್ದೇಶಿತಗೊಂಡ ಸದಸ್ಯನು ಪದಧಾರಣ ಮಾಡಲು ಸ್ವತ: ಅನರ್ಹನೆಂದು ರುಜುವಾತು ಆದರೆ ಅಥವಾ ಪರಿಷತ್ತಿನ ಸದಸ್ಯತ್ವದಿಂದ ಆತನನ್ನು ತೆಗೆದುಹಾಕಬೇಕೆಂದು ಸರ್ಕಾರವು ಅಭಿಪ್ರಾಯ ಪಟ್ಟಲ್ಲಿ, ದುರ್ನಡತೆ ಅಥವಾ ನಿರ್ಲಕ್ಷ್ಯದ ತಪ್ಪಿತಸ್ಥನೆಂದು ಸರ್ಕಾರಕ್ಕೆ ಕಂಡುಬಂದಲ್ಲಿ, ಯುಕ್ತವಾದಂತೆ, ಸರ್ಕಾರವು, ಅಂಥ ಸದಸ್ಯನಿಗೆ, ಪರಿಷತ್ತಿನಿಂದ ಆತನನ್ನು ಏಕೆ ತೆಗೆದುಹಾಕತಕ್ಕದ್ದಲ್ಲವೆಂಬ ಬಗ್ಗೆ ಕಾರಣವನ್ನು ತೋರಿಸಲು ಯುಕ್ತ ಅವಕಾಶವನ್ನು ನೀಡಿದ ತರುವಾಯ ಹಾಗೂ ಅದನ್ನು ಪರೀಕ್ಷಿಸಿದ ನಂತರ, ಅಂಥ ಸದಸ್ಯನ ಸದಸ್ಯತ್ವವನ್ನು ಮುಂದುವರೆಸಬೇಕೆ ಅಥವಾ ಸಂದರ್ಭಾನುಸಾರ ತೆಗೆದುಹಾಕ ಬೇಕೇ ಎಂಬುದನ್ನು ತೀರ್ಮಾನಿಸತಕ್ಕದ್ದು ಮತ್ತು ಪರಿಷತ್ತಿನ ಸದಸ್ಯತ್ವದಿಂದ ವಜಾ ಮಾಡುವಂಥ ಸಂದರ್ಭದಲ್ಲಿ ಅದನ್ನು ಅಧಿಸೂಚನೆಯ ಮೂಲಕ ಮಾಡತಕ್ಕದ್ದು.

(2) ಉಪಾಧ್ಯಕ್ಷ ಅಥವಾ ಕಾರ್ಯನಿರ್ವಾಹಕ ನಿರ್ದೇಶಕನು ಈ ಅಧಿನಿಯಮದ ಅಥವಾ ಅದರಡಿಯಲ್ಲಿ ರಚಿಸಿದ ನಿಯಮಗಳ ಅಥವಾ ವಿನಿಯಮಗಳ ಉಪಬಂಧಗಳನ್ನು ಉದ್ದೇಶಪೂರ್ವಕವಾಗಿ ಲೋಪ ಮಾಡಿದ ಅಥವಾ ಅವುಗಳನ್ನು ನೆರವೇರಿಸಲು ನಿರಾಕರಿಸಿದ ಅಥವಾ ಆತನಲ್ಲಿ ನಿಹಿತವಾಗಿದ್ದ ಅಧಿಕಾರಗಳನ್ನು ದುರುಪಯೋಗಪಡಿಸಿಕೊಂಡ ಆಧಾರದ ಮೇಲೆ, ರಾಜ್ಯ ಸರ್ಕಾರವು ಈ ಸಂಬಂಧದಲ್ಲಿ ಆದೇಶಿಸಿದ್ದ ವಿಚಾರಣೆಯ ವರದಿಯನ್ನು ಪರಿಗಣಿಸಿ ರಾಜ್ಯ ಸರ್ಕಾರವು ಹೊರಡಿಸಿದ ಆದೇಶದ ಹೊರತಾಗಿ, ತೆಗೆದುಹಾಕತಕ್ಕದ್ದಲ್ಲ.

**13. ಆಕಸ್ಮಿಕ ಖಾಲಿ ಸ್ಥಾನವನ್ನು ಭರ್ತಿ ಮಾಡುವುದು.–** ನಾಮ ನಿರ್ದೇಶಿತನಾದ ಅಥವಾ ನೇಮಕಗೊಂಡ ಸದಸ್ಯನ ಪದದಲ್ಲಿ, ಆತನ ಮರಣ, ರಾಜೀನಾಮೆ, ವಜಾ ಅಥವಾ ಅನ್ಯಥಾ ಕಾರಣದಿಂದಾಗಿ ಆಕಸ್ಮಿಕ ಖಾಲಿ ಸ್ಥಾನವು ಉಂಟಾದಲ್ಲಿ, ಅಂಥ ಖಾಲಿ ಸ್ಥಾನವನ್ನು ನಾಮ ನಿರ್ದೇಶನದ ಮೂಲಕ ಅಥವಾ ಸಂದರ್ಭಾನುಸಾರ ನೇಮಕದ ಮೂಲಕ ಸರ್ಕಾರವು ಭರ್ತಿ ಮಾಡತಕ್ಕದ್ದು ಹಾಗೂ ಅಂಥ ಸದಸ್ಯನು ಯಾರ ಸ್ಥಾನಕ್ಕೆ ನಾಮನಿರ್ದೇಶಿತನಾಗಿರುತ್ತಾನೋ ಅಥವಾ ನೇಮಕಗೊಂಡಿರುತ್ತಾನೋ ಅಂಥ ಸದಸ್ಯನ ಉಳಿದ ಅವಧಿಗೆ ಮಾತ್ರ ಪದಧಾರಣ ಮಾಡತಕ್ಕದ್ದು.

## ಅಧ್ಯಾಯ – III

### ಕಾರ್ಯನಿರ್ವಾಹಕ ಸಮಿತಿ

**14. ಕಾರ್ಯನಿರ್ವಾಹಕ ಸಮಿತಿ.–** ಪರಿಷತ್ತಿಗಾಗಿ ಪರಿಷತ್ತಿನ ಈ ಮುಂದಿನ ಸದಸ್ಯರುಗಳನ್ನು ಒಳಗೊಂಡ ಒಂದು ಕಾರ್ಯನಿರ್ವಾಹಕ ಸಮಿತಿಯು ಇರತಕ್ಕದ್ದು ಎಂದರೆ.–

| | | |
|---|---|---|
| (i) | ಪರಿಷತ್ತಿನ ಉಪಾಧ್ಯಕ್ಷ | ಅಧ್ಯಕ್ಷ |
| (ii) | ಕಾರ್ಯನಿರ್ವಾಹಕ ನಿರ್ದೇಶಕ | ಸದಸ್ಯ – ಕಾರ್ಯದರ್ಶಿ |
| (iii) | ಒಂದು ವರ್ಷದ ಅವಧಿಗಾಗಿ ಪರಿಷತ್ತಿನಿಂದ ಸರದಿಯ ಮೂಲಕ ನಾಮನಿರ್ದೇಶಿತರಾದ ಇಬ್ಬರು ಕುಲಪತಿಗಳು | ಸದಸ್ಯರು |
| (iv) | ಇಪ್ಪತ್ತು ತಿಂಗಳ ಅವಧಿಗಾಗಿ ಸರದಿಯ ಮೂಲಕ ಪರಿಷತ್ತಿನಿಂದ ನಾಮ ನಿರ್ದೇಶಿತರಾದ ಪರಿಷತ್ತಿನ ಸದಸ್ಯರಾಗಿರುವ ಪ್ರಸಿದ್ಧ ಹತ್ತು ಜನ ಶಿಕ್ಷಣ ತಜ್ಞರ ಪೈಕಿ ನಾಲ್ಕು ಜನ ಶಿಕ್ಷಣ ತಜ್ಞರು | ಸದಸ್ಯರು |
| (v) | ಸರ್ಕಾರದ ಪ್ರಧಾನ ಕಾರ್ಯದರ್ಶಿ ಉನ್ನತ ಶಿಕ್ಷಣ ಇಲಾಖೆ | ಪದನಿಮಿತ್ತ ಸದಸ್ಯ |
| (vi) | ಸರ್ಕಾರದ ಪ್ರಧಾನ ಕಾರ್ಯದರ್ಶಿ ವೈದ್ಯಕೀಯ ಶಿಕ್ಷಣ ಇಲಾಖೆ | ಪದನಿಮಿತ್ತ ಸದಸ್ಯ |

15. ಕಾರ್ಯನಿರ್ವಾಹಕ ಸಮಿತಿಯ ಅಧಿಕಾರಗಳು ಮತ್ತು ಪ್ರಕಾರ್ಯಗಳು.– ಕಾರ್ಯನಿರ್ವಾಹಕ ಸಮಿತಿಯು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು ಹಾಗೂ ಈ ಮುಂದಿನ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು, ಎಂದರೆ:–

(i) ಇದು ಕಾರ್ಯನೀತಿಗೆ ಸಂಬಂಧಿಸಿದ ಎಲ್ಲಾ ವಿಷಯಗಳಲ್ಲಿ ಪರಿಷತ್ತಿನ ಸಹಮತಿಗೆ ಒಳಪಟ್ಟು, ಪರಿಷತ್ತಿನ ಪರವಾಗಿ ನಿರ್ಧಾರಗಳನ್ನು ತೆಗೆದುಕೊಳ್ಳುವುದಕ್ಕೆ ಸಕ್ಷಮವಾಗಿರತಕ್ಕದ್ದು:

ಪರಂತು, ತುರ್ತು ಸಂದರ್ಭಗಳಲ್ಲಿ, ಕಾರ್ಯನಿರ್ವಾಹಕ ಸಮಿತಿಯು ಪರಿಷತ್ತಿನ ಅನುಸಮರ್ಥನೆಗೆ ಒಳಪಟ್ಟು ನಿರ್ಧಾರಗಳನ್ನು ತೆಗೆದುಕೊಳ್ಳಬಹುದು;

(ii) ಇದು, ಈ ಅಧಿನಿಯಮದಲ್ಲಿ ಹೇಳಲಾದ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ಅವಶ್ಯಕವಾಗಿರುವಂಥ ವೆಚ್ಚಗಳನ್ನು ವಹಿಸತಕ್ಕದ್ದು ಮತ್ತು ಪರಿಷತ್ತು ಕೈಗೊಂಡ ಎಲ್ಲಾ ತೀರ್ಮಾನಗಳನ್ನು ನೆರವೇರಿಸತಕ್ಕದ್ದು;

(iii) ಇದು, ಪರಿಷತ್ತಿನ ಅನುಮೋದನೆಗಾಗಿ, ಪರಿಷತ್ತಿನ ವಾರ್ಷಿಕ ಶೈಕ್ಷಣಿಕ ಹಾಗೂ ಆರ್ಥಿಕ ಲೆಕ್ಕಪರಿಶೋಧನಾ ವರದಿಗಳನ್ನು ಪರಿಷತ್ತಿನ ಮುಂದೆ ಮಂಡಿಸತಕ್ಕದ್ದು.

(iv) ಇದು, ಗೊತ್ತುಪಡಿಸಬಹುದಾದಂಥ ಇತರ ಅಧಿಕಾರಗಳು, ಪ್ರಕಾರ್ಯಗಳು ಮತ್ತು ಕರ್ತವ್ಯಗಳನ್ನು ಹೊಂದಿರತಕ್ಕದ್ದು.

16. ಸಭೆಗಳು:– (1) ಕಾರ್ಯನಿರ್ವಾಹಕ ಸಮಿತಿಯ ಸಭೆಗಳನ್ನು ಅಧ್ಯಕ್ಷರ ಸಲಹೆಯ ಮೇರೆಗೆ ಕಾರ್ಯನಿರ್ವಾಹಕ ನಿರ್ದೇಶಕರು ನಡೆಸತಕ್ಕದ್ದು.

(2) ಇದು ಅವಶ್ಯವಾಗಬಹುದಾದಷ್ಟು ಸಲ, ಅಂಥ ಸಮಯದಲ್ಲಿ ಮತ್ತು ಸ್ಥಳದಲ್ಲಿ ಸಭೆ ಸೇರತಕ್ಕದ್ದು ಮತ್ತು ವಿನಿಯಮಗಳಲ್ಲಿ ಉಪಬಂಧಿಸಬಹುದಾದಂಥ ಪ್ರಕ್ರಿಯೆಯ ನಿಯಮಗಳನ್ನು ಪಾಲಿಸತಕ್ಕದ್ದು, ಪರಂತು ಇದು ಕನಿಷ್ಠ ಮೂರು ತಿಂಗಳುಗಳಿಗೊಮ್ಮೆಯಾದರೂ ಸಭೆ ಸೇರತಕ್ಕದ್ದು.

(3) ಕಾರ್ಯನಿರ್ವಾಹಕ ಸಭೆಗಳ ಕೋರಂ, ಪ್ರತಿಯೊಂದು ನಿಕಾಯದಲ್ಲಿನ ಭರ್ತಿಯಾದ ಸದಸ್ಯತ್ವದ ಮೂರನೇ ಒಂದರಷ್ಟು ಆಗಿರತಕ್ಕದ್ದು ಮತ್ತು ಸಭೆಗಳಲ್ಲಿ ಹಾಜರಿದ್ದು ಮತ ಚಲಾಯಿಸುವ ಸದಸ್ಯರ ಸರಳ ಬಹುಮತದ ಮೂಲಕ ತೀರ್ಮಾನಗಳನ್ನು ತೆಗೆದುಕೊಳ್ಳಬಹುದು.

## ಅಧ್ಯಾಯ – IV

### ಸರ್ಕಾರದಿಂದ ನಿರ್ದೇಶನಗಳು

**17. ಸರ್ಕಾರದಿಂದ ನಿರ್ದೇಶನಗಳು.–** ಪರಿಷತ್ತಿನ ಶಿಫಾರಸ್ಸಿನ ಮೇರೆಗೆ, ಅಥವಾ ತಾನಾಗಿಯೇ, ಸರ್ಕಾರವು, ಅದರಲ್ಲಿ ನಿರ್ದಿಷ್ಟಪಡಿಸಬಹುದಾದಂಥ ವಿಧಾನದಲ್ಲಿ ಸುಧಾರಣೆಗಳನ್ನು ಕಾರ್ಯಗತಗೊಳಿಸುವುದಕ್ಕೆ ಅವಶ್ಯವಾಗಬಹುದಾದಂಥ

ಮಾರ್ಪಾಟಿನೊಂದಿಗೆ ಯಾವುದೇ ವಿಶ್ವವಿದ್ಯಾಲಯಕ್ಕೆ ನಿರ್ದೇಶನವನ್ನು ನೀಡಬಹುದು. ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, ಸರ್ಕಾರವು ನೀಡಿದ ನಿರ್ದೇಶನಗಳನ್ನು ಕಾರ್ಯಗತಗೊಳಿಸುವುದು ಮತ್ತು ಅದಕ್ಕನುಸಾರವಾಗಿ ತೆಗೆದುಕೊಂಡ ಕ್ರಮದ ಬಗ್ಗೆ ಸರ್ಕಾರಕ್ಕೆ ಮತ್ತು ಪರಿಷತ್ತಿಗೆ ವರದಿಯನ್ನು ಸಲ್ಲಿಸುವುದು ವಿಶ್ವವಿದ್ಯಾಲಯಕ್ಕೆ ಕಡ್ಡಾಯವಾಗಿರತಕ್ಕದ್ದು. ಸರ್ಕಾರವು ನೀಡಿದ ನಿರ್ದೇಶನವನ್ನು ವಿಶ್ವವಿದ್ಯಾಲಯಗಳು ಪಾಲನೆ ಮಾಡುತ್ತಿರುವ ಬಗ್ಗೆ ಕಾಲಕಾಲಕ್ಕೆ ಪರಿಷತ್ತು ಪುನರ್ ಪರಿಶೀಲಿಸತಕ್ಕದ್ದು.

## ಅಧ್ಯಾಯ – V

## ಪರಿಷತ್ತಿನ ನಿಧಿಗಳು

**18. ಪರಿಷತ್ತಿನ ನಿಧಿಗಳು.–** (1) ಪರಿಷತ್ತಿನ ನಿಧಿಗಳು, ಸರ್ಕಾರವು, ಅದಕ್ಕೆ ಕಾಲಕಾಲಕ್ಕೆ ಸಂದಾಯ ಮಾಡಿದ, ಎಲ್ಲಾ ಮೊತ್ತಗಳನ್ನು ಮತ್ತು ಕೇಂದ್ರ ಸರ್ಕಾರ, ವಿಶ್ವವಿದ್ಯಾಲಯ ಅನುದಾನ ಆಯೋಗ ಅಥವಾ ಯಾವುದೇ ಇತರ ಪ್ರಾಧಿಕಾರ, ಸಂಸ್ಥೆಗಳು ಅಥವಾ ವ್ಯಕ್ತಿಯಿಂದ ಸಂದಾಯವಾದ ಯಾವುದೇ ಮೊತ್ತವನ್ನು ಒಳಗೊಂಡ, ಎಲ್ಲಾ ಇತರ ಸ್ವೀಕೃತಿಗಳನ್ನು ಒಳಗೊಳ್ಳತಕ್ಕದ್ದು.

(2) ಸರ್ಕಾರವು, ಪ್ರತಿಯೊಂದು ಹಣಕಾಸಿನ ವರ್ಷದಲ್ಲಿ, ಪರಿಷತ್ತಿನ ಕಾರ್ಯನಿರ್ವಹಣೆ ಮತ್ತು ಅದರ ಹೊಣೆಗಾರಿಕೆಗಳು ಮತ್ತು ಕರ್ತವ್ಯಗಳ ನಿರ್ವಹಣೆಗಾಗಿ ಅವಶ್ಯವೆಂದು ಪರಿಗಣಿಸಬಹುದಾದಂಥ ಮೊತ್ತಗಳನ್ನು, ಪರಿಷತ್ತಿಗೆ ಸಂದಾಯ ಮಾಡಬಹುದು.

(3) ಈ ಅಧಿನಿಯಮದಡಿಯಲ್ಲಿ ಅಥವಾ ಅದರ ಉದ್ದೇಶಗಳಿಗಾಗಿ, ಪರಿಷತ್ತು ವಹಿಸಿದ ಎಲ್ಲಾ ವೆಚ್ಚವನ್ನು ನಿಧಿಯಿಂದ ಭರಿಸತಕ್ಕದ್ದು ಮತ್ತು ಆ ವೆಚ್ಚವನ್ನು ಭರಿಸಿದ ತರುವಾಯ, ಹೆಚ್ಚುವರಿಯಾಗಿ ಉಳಿದ ಯಾವುದೇ ಹಣವನ್ನು ನಿಯಮಿಸಬಹುದಾದಂಥ ವಿಧಾನದಲ್ಲಿ ತೊಡಗಿಸತಕ್ಕದ್ದು.

**19. ವಾರ್ಷಿಕ ಲೆಕ್ಕಪತ್ರಗಳು ಮತ್ತು ಲೆಕ್ಕ ಪರಿಶೋಧನೆ.–** (1) ಪರಿಷತ್ತಿನ ಲೆಕ್ಕಪತ್ರಗಳನ್ನು ನಿಯಮಿಸಬಹುದಾದಂಥ ವಿಧಾನದಲ್ಲಿ ಮತ್ತು ಅಂಥ ನಮೂನೆಯಲ್ಲಿ ನಿರ್ವಹಿಸತಕ್ಕದ್ದು.

(2) ಪರಿಷತ್ತು, ಲೆಕ್ಕಪತ್ರಗಳ ವಾರ್ಷಿಕ ತ:ಖ್ತೆಯನ್ನು ನಿಯಮಿಸಬಹುದಾದಂಥ ವಿಧಾನದಲ್ಲಿ ಮತ್ತು ಅಂಥ ನಮೂನೆಯಲ್ಲಿ ಸಿದ್ಧಪಡಿಸತಕ್ಕದ್ದು.

(3) ಪರಿಷತ್ತಿನ ಲೆಕ್ಕಪತ್ರಗಳನ್ನು, ಸರ್ಕಾರವು ಈ ಸಂಬಂಧದಲ್ಲಿ ನೇಮಿಸಬಹುದಾದಂಥ ಲೆಕ್ಕಪರಿಶೋಧಕರು ವರ್ಷಕ್ಕೊಮ್ಮೆ ಪರಿಶೋಧಿಸತಕ್ಕದ್ದು.

(4) ಪರಿಷತ್ತಿನ ಕಾರ್ಯನಿರ್ವಾಹಕ ನಿರ್ದೇಶಕರು ವಾರ್ಷಿಕ ಲೆಕ್ಕಪರಿಶೋಧನಾ ವರದಿಯನ್ನು ಮುದ್ರಿಸುವಂತೆ ಮಾಡತಕ್ಕದ್ದು ಮತ್ತು ಅದರ ಮುದ್ರಿತ ಪ್ರತಿಯನ್ನು ಪ್ರತಿಯೊಬ್ಬ ಸದಸ್ಯನಿಗೆ ಕಳುಹಿಸತಕ್ಕದ್ದು ಹಾಗೂ ಅಂಥ ವರದಿಯನ್ನು ಆಡಳಿತ ಪರಿಷತ್ತಿನ ಮುಂದೆ, ಅದರ ಮುಂದಿನ ಸಭೆಯಲ್ಲಿ ಪರಿಗಣಿಸುವುದಕ್ಕಾಗಿ, ಅಂಥ ವರದಿಯನ್ನು ಇಡತಕ್ಕದ್ದು.

(5) ಪರಿಷತ್ತು, ಲೆಕ್ಕ ಪರಿಶೋಧನಾ ವರದಿಯಲ್ಲಿ ತೋರಿಸಿರಬಹುದಾದ ಯಾವುದೇ ದೋಷ ಅಥವಾ ಅಕ್ರಮದ ಪರಿಹಾರಕ್ಕಾಗಿ ಕೂಡಲೇ ಸೂಕ್ತ ಕ್ರಮ ತೆಗೆದುಕೊಳ್ಳತಕ್ಕದ್ದು.

(6) ಲೆಕ್ಕಪರಿಶೋಧಕನು ಪ್ರಮಾಣೀಕರಿಸಿದ ಪರಿಷತ್ತಿನ ಲೆಕ್ಕಪತ್ರಗಳನ್ನು, ಲೆಕ್ಕಪರಿಶೋಧನಾ ವರದಿ ಮತ್ತು ಅದರ ಮೇಲೆ ಪರಿಷತ್ತು ಮಾಡಿದ ಷರಾಗಳೊಂದಿಗೆ, ನಿಯಮಿಸಬಹುದಾದಂಥ ಸಮಯದೊಳಗೆ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

(7) ಸರ್ಕಾರವು, (6)ನೇ ಉಪ ಪ್ರಕರಣದಡಿ, ವಾರ್ಷಿಕ ವರದಿಯೊಂದಿಗಿನ ವಾರ್ಷಿಕ ಲೆಕ್ಕಪತ್ರಗಳನ್ನು ಸ್ವೀಕರಿಸಿದ ತರುವಾಯ ಆದಷ್ಟು ಬೇಗನೆ, ಅದನ್ನು ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸುವಂತೆ ಮಾಡತಕ್ಕದ್ದು.

**20. ವಾರ್ಷಿಕ ವರದಿ.–** (1) ಪರಿಷತ್ತು, ಈ ಅಧಿನಿಯಮದಡಿಯಲ್ಲಿಯ ತನ್ನ ಚಟುವಟಿಕೆಗಳ ವರದಿಯನ್ನು ಪ್ರತಿ ವರ್ಷ, ಆಯಾ ವರ್ಷದಲ್ಲಿ, ತಯಾರಿಸಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸತಕ್ಕದ್ದು.

(2) ಸರ್ಕಾರವು, (1)ನೇ ಉಪ ಪ್ರಕರಣದಡಿಯಲ್ಲಿ ವರದಿಯನ್ನು ಸ್ವೀಕರಿಸಿದ ತರುವಾಯ, ಆದಷ್ಟು ಬೇಗನೆ, ಅದನ್ನು ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸುವಂತೆ ಮಾಡತಕ್ಕದ್ದು.

## ಅಧ್ಯಾಯ – VI

## ಸಂಕೀರ್ಣ ವಿಷಯಗಳು

**21. ಸದ್ಭಾವನೆಯಿಂದ ಕೈಗೊಂಡ ಕ್ರಮಕ್ಕೆ ರಕ್ಷಣೆ.–** ಈ ಅಧಿನಿಯಮದ, ಅಥವಾ ಅದರ ಅಡಿಯಲ್ಲಿ ರಚಿಸಿದ ಯಾವುವೇ ನಿಯಮಗಳು ಅಥವಾ ವಿನಿಯಮಗಳ ಯಾವುವೇ ಉಪಬಂಧಗಳ ಅನುಸರಣೆಯಲ್ಲಿ ಸದ್ಭಾವನೆಯಿಂದ ಕೈಗೊಂಡ ಅಥವಾ ಕೈಗೊಳ್ಳಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ಪರಿಷತ್ತಿನ ಅಥವಾ ಪರಿಷತ್ತಿನ

ಯಾವೊಬ್ಬ ಸದಸ್ಯನ ಅಥವಾ ಯಾವೊಬ್ಬ ಅಧಿಕಾರಿಯ ಅಥವಾ ನೌಕರನ ವಿರುದ್ಧ ಯಾವುದೇ ದಾವೆ, ಅಭಿಯೋಗ ಅಥವಾ ಇತರ ಕಾನೂನು ವ್ಯವಹರಣೆಗಳನ್ನು ಹೂಡಲು ಅವಕಾಶವಿರತಕ್ಕದ್ದಲ್ಲ.

**22. ಪರಿಷತ್ತಿನ ಸಿಬ್ಬಂದಿ.–** ಪರಿಷತ್ತು, ಸರ್ಕಾರದ ಪೂರ್ವಾನುಮೋದನೆಯೊಡನೆ, ಈ ಅಧಿನಿಯಮದಡಿಯಲ್ಲಿ ತನ್ನ ಕರ್ತವ್ಯಗಳನ್ನು ನಿರ್ವಹಿಸಲು ತಾನು ಅವಶ್ಯವೆಂದು ಭಾವಿಸಬಹುದಾದ ಅಂಥ ಅಧಿಕಾರಿಗಳು ಮತ್ತು ಸಿಬ್ಬಂದಿಯನ್ನು ನೇಮಕ ಮಾಡತಕ್ಕದ್ದು. ಪರಿಷತ್ತಿನ ಅಧಿಕಾರಿಗಳ ಮತ್ತು ಸಿಬ್ಬಂದಿಯ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು, ಪರಿಷತ್ತು ರಚಿಸುವ ವಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು.

**23. ಪರಿಷತ್ತಿನ ಸದಸ್ಯರುಗಳು ಮತ್ತು ಸಿಬ್ಬಂದಿ ಸಾರ್ವಜನಿಕ ನೌಕರರಾಗಿರತಕ್ಕದ್ದು.–** ಪರಿಷತ್ತಿನ ಅಧ್ಯಕ್ಷರು, ಉಪಾಧ್ಯಕ್ಷರು, ಸದಸ್ಯರು, ಅಧಿಕಾರಿಗಳು ಮತ್ತು ಸಿಬ್ಬಂದಿಯು, ಈ ಅಧಿನಿಯಮದ ಅಥವಾ ಈ ಅಧಿನಿಯಮದಡಿಯಲ್ಲಿ ರಚಿಸಲಾದ ಅಥವಾ ಹೊರಡಿಸಲಾದ ಯಾವುದೇ ನಿಯಮ ಅಥವಾ ವಿನಿಯಮ ಅಥವಾ ಆದೇಶ ಅಥವಾ ನಿರ್ದೇಶನದ ಯಾವುದೇ ಉಪಬಂಧಗಳಿಗೆ ಅನುಸಾರವಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಅಥವಾ ಕಾರ್ಯನಿರ್ವಹಿಸಿದ್ದಾರೆಂದು ತಾತ್ಪರ್ಯವಾಗುತ್ತಿದ್ದಾಗ, ಭಾರತೀಯ ದಂಡ ಸಂಹಿತೆಯ (1860ರ ಕೇಂದ್ರ ಅಧಿನಿಯಮ 45) 21ನೇ ಪ್ರಕರಣದ ಅರ್ಥವ್ಯಾಪ್ತಿಯೊಳಗೆ ಸಾರ್ವಜನಿಕ ನೌಕರರೆಂದು ಭಾವಿಸತಕ್ಕದ್ದು.

**24. ವಿನಿಯಮಗಳನ್ನು ರಚಿಸಲು ಅಧಿಕಾರ.–** ಪರಿಷತ್ತು, ಸರ್ಕಾರದ ಪೂರ್ವಾನುಮೋದನೆಯೊಡನೆ, ಈ ಅಧಿನಿಯಮದ ಎಲ್ಲಾ ಅಥವಾ ಯಾವುವೇ ಉದ್ದೇಶಗಳನ್ನು ನೆರವೇರಿಸುವುದಕ್ಕಾಗಿ ಈ ಅಧಿನಿಯಮದ ಮತ್ತು ಅದರಡಿಯಲ್ಲಿ ರಚಿಸಲಾದ ನಿಯಮಗಳ ಉಪಬಂಧಗಳಿಗೆ ಅಸಂಗತವಾಗದಂತೆ ವಿನಿಯಮಗಳನ್ನು ರಚಿಸಬಹುದು.

**25. ನಿಯಮಗಳ ರಚನಾಧಿಕಾರ.–** (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಎಲ್ಲಾ ಅಥವಾ ಯಾವುದೇ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ಅಧಿಸೂಚನೆಯ ಮೂಲಕ ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಅಧಿವೇಶನದಲ್ಲಿರುವಾಗ, ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಿರಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಮಂಡಿಸತಕ್ಕದ್ದು ಮತ್ತು ಮೇಲೆ ಹೇಳಿದ ಅಧಿವೇಶನ ಅಥವಾ ನಿರಂತರ ಅಧಿವೇಶನಗಳ ನಿಕಟ ತರುವಾಯದ ಅಧಿವೇಶನವು ಮುಕ್ತಾಯವಾಗುವುದಕ್ಕೆ ಮುಂಚೆ ರಾಜ್ಯ ವಿಧಾನಮಂಡಲದ ಎರಡೂ ಸದನಗಳು ನಿಯಮದಲ್ಲಿ ಯಾವುದೇ ಮಾರ್ಪಾಡು ಮಾಡಲು ಒಪ್ಪಿದರೆ, ಅಥವಾ ಆ ನಿಯಮವನ್ನು ರಚಿಸತಕ್ಕದ್ದಲ್ಲವೆಂದು ಒಪ್ಪಿದರೆ ತದನಂತರ ಅಂಥ ನಿಯಮವು ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೀತಿಯಲ್ಲಿ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಯಾವುದೇ ಅಂಥ ಮಾರ್ಪಾಡು ಅಥವಾ ರದ್ದತಿಯು ಆ ನಿಯಮದ ಅಡಿಯಲ್ಲಿ ಈ ಮುಂಚೆ ಮಾಡಲಾದ ಯಾವುದೇ ಕಾರ್ಯದ ಮಾನ್ಯತೆಗೆ ಬಾಧಕವಾಗತಕ್ಕದ್ದಲ್ಲ.

**26. ತೊಂದರೆಗಳನ್ನು ನಿವಾರಿಸಲು ಅಧಿಕಾರ.–** (1) ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ಸರ್ಕಾರವು, ಆದೇಶದ ಮೂಲಕ, ಸಂದರ್ಭವು ಅಗತ್ಯಪಡಿಸಬಹುದಾದಂತೆ, ಆ ತೊಂದರೆಯನ್ನು ನಿವಾರಿಸುವ ಉದ್ದೇಶಕ್ಕಾಗಿ, ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗವಲ್ಲದ, ತನಗೆ ಅವಶ್ಯಕ ಅಥವಾ ಯುಕ್ತವೆಂದು ಕಂಡುಬರುವ, ಯಾವುದೇ ಕ್ರಮ ತೆಗೆದುಕೊಳ್ಳಬಹುದು.

**(2) (1)ನೇ ಉಪ ಪ್ರಕರಣದ ಅಡಿಯಲ್ಲಿ ಮಾಡಲಾದ ಪ್ರತಿಯೊಂದು ಆದೇಶವನ್ನು, ಅದನ್ನು ಮಾಡಿದ ತರುವಾಯ ಆದಷ್ಟು ಬೇಗನೆ ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸತಕ್ಕದ್ದು.**

**27. 2001ರ ಕರ್ನಾಟಕ ಅಧಿನಿಯಮ 29ರ ತಿದ್ದುಪಡಿ.–** ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000ರ (2001ರ ಕರ್ನಾಟಕ ಅಧಿನಿಯಮ 29) 72ನೇ ಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

### ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ರಾಷ್ಟ್ರೀಯ ಶಿಕ್ಷಣ ಕಾರ್ಯನೀತಿ, 1986 ಮತ್ತು ಡಾ. ಎಂ. ಆರ್. ಶ್ರೀನಿವಾಸನ್‌ರವರ ಅಧ್ಯಕ್ಷತೆಯಲ್ಲಿ, 2002ರಲ್ಲಿ ರಾಜ್ಯ ಸರ್ಕಾರವು ರಚಿಸಿದ ಉನ್ನತ ಶಿಕ್ಷಣ ಕಾರ್ಯಪಡೆಯು, ವಿಶ್ವವಿದ್ಯಾಲಯ ಶಿಕ್ಷಣವೂ ಒಳಗೊಂಡ ಉನ್ನತ ಶಿಕ್ಷಣಕ್ಕಾಗಿ ರಾಜ್ಯಮಟ್ಟದ ಯೋಜನೆ ರೂಪಿಸುವುದನ್ನು ಮತ್ತು ಸಮನ್ವಯವನ್ನು, ಸ್ವತಂತ್ರ ಹಾಗೂ ಸ್ವಾಯತ್ತವಾದ ಉನ್ನತ ಶಿಕ್ಷಣ ಪರಿಷತ್ತಿನ ಮೂಲಕವೇ ಮಾಡತಕ್ಕದ್ದೆಂದು ಶಿಫಾರಸು ಮಾಡಿದೆ. ಉನ್ನತ ಶಿಕ್ಷಣ ವಲಯದಲ್ಲಿ, ಅತ್ಯುತ್ತಮ ಪರಿಣತಿ, ಒಗ್ಗೂಡಿಸಿಕೊಳ್ಳುವಿಕೆ ಮತ್ತು ಪ್ರವೇಶಾವಕಾಶವನ್ನು ಸ್ಪಷ್ಟವಾಗಿ ತಿಳಿಸುವ ಉದ್ದೇಶಕ್ಕಾಗಿ, ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000ದಡಿಯಲ್ಲಿ ಸ್ಥಾಪಿತವಾದ, ಪ್ರಸ್ತುತ ಅಸ್ತಿತ್ವದಲ್ಲಿರುವ ಅಂತರ ವಿಶ್ವವಿದ್ಯಾಲಯ ಮಂಡಳಿಯನ್ನು ರದ್ದುಗೊಳಿಸಲು ಶಿಫಾರಸು ಮಾಡಿದ್ದು, ಅದರ ಸ್ಥಾನದಲ್ಲಿ ಉನ್ನತ ಶಿಕ್ಷಣ ರಾಜ್ಯ ಪರಿಷತ್ತನ್ನು ಸ್ಥಾಪಿಸಲು ಸಲಹೆ ನೀಡಿದೆ.

2. ಸರ್ಕಾರ ಮತ್ತು ವಿಶ್ವವಿದ್ಯಾಲಯಗಳ ನಡುವೆ ಹಾಗೂ ವಿಶ್ವವಿದ್ಯಾಲಯಗಳು ಮತ್ತು ಅತ್ಯುನ್ನತ ಮಟ್ಟದ ನಿಯಂತ್ರಣ ನಿಕಾಯಗಳ ನಡುವೆ ಕಾರ್ಯ ಸಾಮರ್ಥ್ಯ ಪೂರೈಸಿಕೊಳ್ಳುವ ಸಾಮೂಹಿಕ ಪ್ರಯತ್ನವಾಗಿ ಅವರಲ್ಲಿ ಪರಸ್ಪರ ನಿಕಟ ಸಂಬಂಧವನ್ನು ಏರ್ಪಡಿಸುವ ಉದ್ದೇಶದಿಂದ ಸರ್ಕಾರ, ವಿಶ್ವವಿದ್ಯಾಲಯ, ಶೈಕ್ಷಣಿಕ ಸಂಸ್ಥೆಗಳು ಮತ್ತು ತಜ್ಞರ ಸಾಮೂಹಿಕ ಪ್ರಯತ್ನವಾಗಿ ಉನ್ನತ ಶಿಕ್ಷಣ ರಾಜ್ಯ ಪರಿಷತ್ತನ್ನು ಸ್ಥಾಪಿಸುವುದು ಯುಕ್ತವೆಂದು ಸರ್ಕಾರವು ಪರಿಗಣಿಸಿದೆ. ಅಷ್ಟೇ ಅಲ್ಲದೆ, ಪರಿಷತ್ತನ್ನು ಸ್ಥಾಪಿಸುವುದರಿಂದ,-

(ಎ) ಕಾರ್ಯನೀತಿ ಮತ್ತು ದೂರದೃಷ್ಟಿ ಯೋಜನೆಯನ್ನು ರೂಪಿಸುವಲ್ಲಿ, ಸರ್ಕಾರವು ಶೈಕ್ಷಣಿಕ ಶ್ರೇಷ್ಠತೆ ಮತ್ತು ಸಾಮಾಜಿಕ ನ್ಯಾಯವನ್ನು ಪ್ರೋತ್ಸಾಹಿಸಲು;

(ಬಿ) ರಾಜ್ಯದಲ್ಲಿನ ಎಲ್ಲಾ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಸ್ವಾಯತ್ತತೆ, ಹೊಣೆಗಾರಿಕೆ ಮತ್ತು ಸಮನ್ವಯವನ್ನು ಖಚಿತಪಡಿಸಿಕೊಳ್ಳಲು, ಮತ್ತು

(ಸಿ) ರಾಜ್ಯದ ಸಾಮಾಜಿಕ-ಆರ್ಥಿಕ ಅಗತ್ಯತೆಗಳಿಗನುಸಾರವಾಗಿ ಉನ್ನತ ಶಿಕ್ಷಣದ ಸಾಮರಸ್ಯ ಬೆಳವಣಿಗೆಗೆ ಮಾರ್ಗದರ್ಶನ ನೀಡಲು,-

- ಸೂಕ್ತ ಪರಿಸರಕ್ಕೆ ಅವಕಾಶ ಕಲ್ಪಿಸಲು ಸಾಧ್ಯವಾಗುತ್ತದೆಂದು ಸರ್ಕಾರವು ಪರಿಗಣಿಸುತ್ತದೆ.

3. ಅದಕ್ಕನುಸಾರವಾಗಿ, ಉನ್ನತ ಶಿಕ್ಷಣಕ್ಕಾಗಿ ಕರ್ನಾಟಕ ರಾಜ್ಯ ಪರಿಷತ್ತನ್ನು ಒಂದು ಸ್ವಾಯತ್ತ ಪ್ರಾಧಿಕಾರವನ್ನಾಗಿ ಸ್ಥಾಪಿಸಲು ಪ್ರಸ್ತಾವಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ವಿಧೇಯಕವು, ರಾಜ್ಯದಲ್ಲಿ ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತನ್ನು ರಚಿಸಲು ಉದ್ದೇಶಿಸುತ್ತದೆ. ಸದರಿ ಉದ್ದೇಶಕ್ಕಾಗಿ ವರ್ಷಕ್ಕೆ ಸುಮಾರು 1.50 ಕೋಟಿಗಳಷ್ಟು ಆವರ್ತಕ ವೆಚ್ಚ ಉಂಟಾಗುತ್ತದೆ.

**ಅರವಿಂದ ಲಿಂಬಾವಳಿ**
ಉನ್ನತ ಶಿಕ್ಷಣ ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

**ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಕುರಿತು ಜ್ಞಾಪನ ಪತ್ರ**

ಖಂಡ 5: 5ನೇ ಖಂಡದ ಎ ಉಪಶೀರ್ಷಿಕೆಯ (viii) ನೇ ಬಾಬು, ಪರಿಷತ್ತಿನ ವಾರ್ಷಿಕ ಆಯವ್ಯಯ ಮತ್ತು ವೆಚ್ಚದ ಲೆಕ್ಕ ಪರಿಶೋಧಿತ ತಃಖ್ತೆಯನ್ನು ತಯಾರಿಸುವ ವಿಧಾನವನ್ನು ನಿಯಮಗಳ ಮೂಲಕ ನಿಯಮಿಸಲು ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಖಂಡ 7 7ನೇ ಖಂಡದ (2) ಉಪಖಂಡವು, ಉಪಾಧ್ಯಕ್ಷರು ಚಲಾಯಿಸಬಹುದಾದ ಅಧಿಕಾರಗಳನ್ನು ಮತ್ತು ನೆರವೇರಿಸಬೇಕಾದ ಪ್ರಕಾರ್ಯಗಳನ್ನು ನಿಯಮಗಳ ಮೂಲಕ ನಿಯಮಿಸಲು ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಖಂಡ 8 8ನೇ ಖಂಡದ (4) ಉಪಖಂಡವು, ಕಾರ್ಯನಿರ್ವಾಹಕ ನಿರ್ದೇಶಕರು ಚಲಾಯಿಸಬಹುದಾದ ಅಧಿಕಾರಗಳನ್ನು ಮತ್ತು ನೆರವೇರಿಸಬೇಕಾದ ಪ್ರಕಾರ್ಯಗಳನ್ನು ನಿಯಮಗಳ ಮೂಲಕ ನಿಯಮಿಸಲು ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಖಂಡ 11 (i) 11ನೇ ಖಂಡದ (5) ಉಪಖಂಡವು, ಅಧಿಕಾರೇತರ ಸದಸ್ಯರು ಅರ್ಹರಿರುವ ಪ್ರಯಾಣಭತ್ಯೆ, ದಿನಭತ್ಯೆ ಮತ್ತು ಉಪವೇಶನ ಶುಲ್ಕಗಳ ದರಗಳನ್ನು, ನಿಯಮಗಳ ಮೂಲಕ ನಿಯಮಿಸಲು ಸರ್ಕಾರಕ್ಕೆ ಅಧಿಕಾರ ನೀಡುತ್ತದೆ

(ii) 11ನೇ ಖಂಡದ (6) ಉಪಖಂಡವು, ಉಪಾಧ್ಯಕ್ಷರು, ಕಾರ್ಯನಿರ್ವಾಹಕ ನಿರ್ದೇಶಕರು ಹಾಗೂ ಸದಸ್ಯರ ಸೇವಾ ನಿಬಂಧನೆಗಳು ಮತ್ತು ಷರತ್ತುಗಳನ್ನು ನಿಯಮಗಳ ಮೂಲಕ ನಿಯಮಿಸಲು ಸರ್ಕಾರಕ್ಕೆ ಅಧಿಕಾರ ನೀಡುತ್ತದೆ

ಖಂಡ 15 15ನೇ ಖಂಡದ (iv) ಉಪಖಂಡವು, ಕಾರ್ಯನಿರ್ವಾಹಕ ಸಮಿತಿಯ ಅಧಿಕಾರಗಳು, ಪ್ರಕಾರ್ಯಗಳು ಹಾಗೂ ಕರ್ತವ್ಯಗಳನ್ನು ನಿಯಮಗಳ ಮೂಲಕ ನಿಯಮಿಸಲು ಸರ್ಕಾರಕ್ಕೆ ಅಧಿಕಾರ ನೀಡುತ್ತದೆ

ಖಂಡ 18 18ನೇ ಖಂಡದ (3) ಉಪಖಂಡವು, ಅಂಥ ವೆಚ್ಚವನ್ನು ಮಾಡುದ ತರುವಾಯ ಉಳಿಯುವ ಹೆಚ್ಚುವರಿ ಮೊಬಲಗನ್ನು ಭರಿಸುವ ವಿಧಾನಗಳನ್ನು ನಿಯಮಗಳ ಮೂಲಕ ನಿಯಮಿಸಲು ಸರ್ಕಾರಕ್ಕೆ ಅಧಿಕಾರ ನೀಡುತ್ತದೆ

ಖಂಡ 19 (i) 19ನೇ ಖಂಡದ (1) ಉಪಖಂಡವು, ಪರಿಷತ್ತಿನ ಲೆಕ್ಕಪತ್ರಗಳನ್ನು ನಿರ್ವಹಿಸುವ ವಿಧಾನವನ್ನು ನಿಯಮಗಳ ಮೂಲಕ ನಿಯಮಿಸಲು ಸರ್ಕಾರಕ್ಕೆ ಅಧಿಕಾರ ನೀಡುತ್ತದೆ

(ii) 19ನೇ ಖಂಡದ (2) ಉಪಖಂಡವು, ಪರಿಷತ್ತಿನ ಲೆಕ್ಕಪತ್ರಗಳ ವಾರ್ಷಿಕ ತ:ಖ್ತೆಯನ್ನು ತಯಾರಿಸುವ ವಿಧಾನವನ್ನು ನಿಯಮಗಳ ಮೂಲಕ ನಿಯಮಿಸಲು ಸರ್ಕಾರಕ್ಕೆ ಅಧಿಕಾರ ನೀಡುತ್ತದೆ

(iii) 19ನೇ ಖಂಡದ (6) ಉಪಖಂಡವು, ಲೆಕ್ಕಪರಿಶೋಧಿತ ವರದಿಯನ್ನು ಸರ್ಕಾರಕ್ಕೆ ಕಳುಹಿಸುವ ಅವಧಿಯನ್ನು ನಿಯಮಗಳ ಮೂಲಕ ನಿಯಮಿಸಲು ಸರ್ಕಾರಕ್ಕೆ ಅಧಿಕಾರ ನೀಡುತ್ತದೆ

ಮೇಲಿನ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**KARNATAKA LEGISLATIVE ASSEMBLY**
**THIRTEENTH LEGISLATIVE ASSEMBLY**
**SIXTH SESSION**

**THE KARNATAKA STATE HIGHER EDUCATION COUNCIL BILL, 2010**
**(L.A. Bill No. 28 of 2010)**

A Bill to provide for the constitution of the Karnataka State Higher Education Council.

Whereas the National Education Policy, 1986 and the Task Force on Higher Education set up by the State Government in 2002 recommended that State level planning and co-ordination of higher education shall be done through Council for Higher Education;

Whereas it is expedient to establish a State Higher Education Council as a collective of the Government, Universities, academics and experts in order to forge a synergic relationship among them by occupying an operational space in between the Government and Universities and between Universities and apex level regulatory bodies, with the objects of (i) promoting academic excellence and social justice by the Government in policy formulation and perspective planning, (ii) ensuring the autonomy, accountability and co-ordination among all institutions of higher education in the State, and (iii) guiding the harmonious growth of higher education in accordance with the socio-economic requirements of the State;

BE it enacted by the Karnataka State Legislature in the Sixty first year of the Republic of India, as follows:-

**CHAPTER - I**
**PRELIMINARY**

**1. Short title and commencement. –** (1) This Act may be called the Karnataka State Higher Education Council Act, 2010.

(2) It shall come into force on such date as the State Government, may by notification, appoint.

**2. Definitions. -**In this Act, unless the context otherwise requires,-

(a) “Chairman” means the Chairman of the Council;

(b) “College” means any College or any institution maintained or approved by, or affiliated to, any University and providing courses of study for admission to the examination of the University and includes autonomous college;

(c) "Council" means the Karnataka State Higher Education Council constituted under Section 3;

(d) “Executive Committee” means the Executive Committee of the Council;

(e) “Executive Director” means Executive Director and the Member-Secretary of the Council

(f) "Government" means the Government of Karnataka;

(g) “Higher education” means an education, whether professional, technical or otherwise, and includes research studies leading to the award of a degree or diploma or certificate by a University or an institution approved by the University;

(h) "Institution" means an academic institution of higher education and research, not being a college, associated with and admitted to privileges of a University or maintained by a University;

(i) “Medical Council of India” means the Council constituted under the Indian Medical Council Act, 1956 (Central Act 102 of 1956);

(j) “Member” means a member of the Governing Council or the Executive Committee, as the case may be;

(k) "Prescribed" means prescribed by rules made under this Act;

(l) “Regulations” means the regulations made by the Governing Council under this Act;

(m) "State" means the State of Karnataka;

(n) "Statutes", "Ordinances" and "Regulations" of a University mean respectively, the Statutes, the Ordinances and the Regulations issued under the respective Acts of a University;

(o) “Teacher” means any regular teacher working in a University, Government College or Government aided or Unaided College or institution whose appointment has been made or approved by or on behalf of the Government or a University;

(p) "University" means any University in the State established by an Act of the State Legislature;

(q) "University Grants Commission" means the Commission established under the University Grants Commission Act, 1956 (Central Act 3 of 1956);

(r) “Vice-Chairman” means the Vice-Chairman of the Council.

## CHAPTER-II

## CONSTITUTION, POWERS AND FUNCTIONS OF THE COUNCIL

**3. Constitution of the Council.-** (1) The Government shall constitute the Council to be called the Karnataka State Higher Education Council, which shall consist of the following, namely:-

| | |
|---|---|
| (i)The Minister in charge of the Higher Education | Chairman |
| (ii) An eminent educationist who is or has been the Vice-Chancellor of the university or member of any apex body of Higher education nominated by the Government | Vice-Chairman |
| (iii) the Executive Director | Member-Secretary |
| (iv) Vice-Chancellors of the State Universities | Members |
| (v) A nominee of the University Grants Commission not below the rank of Joint Secretary | Ex-officio member |
| (vi) Ten academicians of repute from different Academic disciplines, of whom two shall be a woman and two belonging to the Scheduled Castes or Scheduled Tribes, nominated by the Government. | Members |
| (vii) The Principal Secretary to Government, Finance Department | Ex-officio Member |
| (viii) The Principal Secretary to Government, Higher Education Department | Ex-officio Member |
| (ix) The Principal Secretary to Government, Medical Education | Ex-officio member |
| (x) The Principal Secretary to Government, Primary and Secondary Education | Ex-officio member |
| (xi) The Principal Secretary to Government, Agriculture | Ex-officio member |
| (xii) The Principal Secretary to Government, Horticulture | Ex-officio member |
| (xiii) The Principal Secretary to Government, Animal Husbandry & Veterinary Sciences | Ex-officio member |
| (xiv) The Secretary to Government, Law and Justice | Ex-officio member |
| (xv) The Principal Secretary to Government, Social Welfare | Ex-officio member |
| (xvi) The Commissioner of Collegiate Education | Ex-officio member |
| (xvii) The Director of Technical Education | Ex-officio member |

| | |
|---|---|
| (xviii) The Director of Medical Education | Ex-officio member |
| (xix) The Commissioner for Pre-University Board. | Ex-officio member |

(2) The Council shall be a body corporate by the name aforesaid, having perpetual succession and a common seal and shall by the said name sue and be sued.

(3) The headquarters of the Council shall be at Bangalore.

**4. Disqualifications.-** (1) No person shall be qualified for nomination or to continue as a member of the Council, if on the date of such nomination he is,-

(a) of unsound mind or a deaf, mute; or

(b) adjudicated as an un-discharged insolvent;

(c) sentenced by a criminal court to imprisonment for any offence involving moral turpitude;

(d) directly or indirectly by himself or his partner has any share or interest in any work done by order of, or in any contract entered into on behalf of the Council;

(e) a person who has been terminated from any Government or university service for guilty of misconduct or negligence.

(2) In case of dispute or doubt as to whether a person is disqualified under sub-section (1), the decision of the Government shall be final.

(3) Save as otherwise provided in this Act, no person who is not a graduate of any University established by law shall be eligible for nomination as a member of the Council under this Act.

(4) Notwithstanding anything contained in this Act but save as otherwise provided, any employee of the University, both teaching and non-teaching or ministerial or any person in the management of an affiliated college in whatever capacity shall not be eligible for nomination as member of the Council under this Act.

**5. Powers and functions of the Council.-** The powers and functions of the Council shall be as follows, namely:-

**A. General Functions:-**

(i) It shall render advice to the Government, Universities and other institutions of higher education in the State;

(ii) It shall co-ordinate the roles of the Government, Universities and apex regulatory agencies in higher education within the State;

(iii) It shall evolve new concepts, programmes and perspective plans for development of higher education suo moto or on the suggestion by the Government or requests from Universities or other institutions in the State;

(iv) It shall monitor the progress of implementation of the Developmental Programmes of Universities and colleges taken up in the State with the assistance of National Regulatory Agencies.

(v) It shall promote co-operation and co-ordination of the educational institutions among themselves and explore the scope for inter action with industry and other related establishment;

(vi) It shall prepare an annual report making self-appraisal and showing details of its performance;

(vii) It shall suggest measures for the academic and financial accountability of the Universities and other Institutions of higher education in the State;

(viii) It shall prepare the annual budget and the audited statement of expenditure in such manner as may be prescribed.

**(B) Academic Functions:-**

(i) It shall encourage and promote innovations in curricular development, restructuring of courses and updating of syllabi in the University and the colleges;

(ii) It shall co-ordinate the programmes of autonomous colleges and monitor their implementation;

(iii) It shall devise steps to improve the standards of examinations conducted by Universities and suggest necessary reforms;

(iv) It shall facilitate training of teachers in Universities and colleges;

(v) It shall promote and monitor publication of quality text book, monographs and reference books;

(vi) It shall develop programmes for greater academic co-operation and interaction between University and College teachers and to facilitate mobility of students and teachers within and outside the State;

(vii) It shall advice on regulation of admission in Universities, colleges and institutions of higher education;

(viii) It shall encourage sports, games, physical education and cultural activities in the Universities and colleges;

(ix) It shall review periodically, the existing guidelines and furnish recommendations for regulating admissions to various courses and for appointments to the posts of teachers and teacher-administrators in Universities, colleges and other institutions of higher education;

(x) It shall prepare an overview report on the working of the Universities and colleges in the State and furnish a copy thereof to the Government and such other authorities as the Government may specify;

(xi) It shall perform such other functions for the realization of the twin objectives of equality and excellence in higher education;

**(C) Advisory Functions:-**

(1) It shall advice the Government,-

(i) regarding the norms, if any relating to the establishment of new Universities and colleges besides additional subjects and departments in the existing Universities and colleges;

(ii) regarding the Statutes, Ordinances and Regulations of Universities in the State and to suggest modification wherever required to maintain uniformity in the administration without prejudice to the autonomy for the academic pursuits;

(iii) on any University, college or institution of higher education or any other matter relating to higher education and research which may be referred to the Council;

(iv) in determining the block maintenance grants and to lay down the basis for such grants;

(2) It shall perform any other functions necessary for the furtherance of higher Education in the State.

**(D) Powers of the Council.-**

(i) It shall prepare a perspective plan for implementation of the policies, evolve various programmes and determine the priorities of such programmes for implementation;

(ii) It shall propose general guidelines for the release of grants by the Government to Universities and other institutions of higher education and advise the Government about the release of such grants to each University and other institutions of higher education;

(iii) It shall give such directions as may be necessary for effective functioning of the Executive Committee in accordance with its objectives;

(iv) It shall frame regulations in accordance with this Act and the rules made there under;

(v) It shall have such other powers as may be prescribed for the effective implementation of the programmes for the furtherance of the objectives of this Act.

**6. The Chairman.-** (1) The Chairman shall have the right to call for report on any matter pertaining to the affairs of the Council and offer suggestions for the improvement of the functioning of the Council.

(2) The Chairman shall preside over the meetings of the Council and the Executive Committee.

**7. The Vice-Chairman.-** (1) The Vice-Chairman shall preside over the meetings of the Council or the Executive Committee in the absence of the Chairman.

(2) The Vice-Chairman shall exercise such other powers and perform such other functions as may be prescribed.

(3) The Vice- Chairman or any member other than an ex-officio member shall be appointed by the Government ordinarily for a term of five years and shall not be eligible for reappointment for a second term:

Provided that a person who has not attained the age of seventy years shall be eligible to be appointed as the Vice-Chairman.

**8. The Executive Director.-** (1) A senior administrative officer, serving or retired, not below the rank of a Principal Secretary to the State Government, having aptitude and experience in the field of education or who is or has been a Vice-Chancellor or a Professor with not less than ten years of experience shall be appointed by the Government as the Executive Director of the Council.

(2) The Executive Director shall be appointed by the Government ordinarily for a term of five years and shall not be eligible for reappointment for a second term:

Provided that a person who has not attained the age of sixty-five years shall be eligible to be appointed as the Executive Director.

(3) The Executive Director shall be the Executive officer and responsible for the co-ordination of the functions of the Council.

(4) The Executive Director shall exercise such powers and perform such functions as may be prescribed.

**9. Term of the Council.-** The term of the Council shall be for a period of five years. The Government shall re-constitute the Council once in every five years:

Provided that in the event of delay in the constitution of the new Council, the existing Council may continue for a period of six months from the date of expiry of the term or till the reconstitution of new council whichever is earlier.

**10. Meetings of the Council.-** (1) The Council shall meet as often as may be necessary, at such time and place and observe such rules of procedure as may be provided in the regulations, but it shall meet at least twice a year.

(2) It shall have power to act, notwithstanding any vacancy in the membership or any defect in the constitution thereof, and the proceedings of the Council shall be valid notwithstanding that some person, who was not entitled to be a member, had attended, or otherwise had taken part in the proceedings of the Council.

(3) The meeting of the Council shall be convened by the Executive Director on the advice of the Chairman.

(4) The quorum of the meeting of the Council shall be one third of the total members of the Council. The decisions of the meeting may be taken by simple majority of those present and voting.

**11. Terms and conditions of the Vice-Chairman, the Executive Director and members.-** (1) The Vice-Chairman, Executive Director or any Member, may in writing under his signature, addressed to the Chairman, resign his membership to the Council:

Provided that he shall continue to hold such office until his resignation is accepted and communicated in writing.

(2) The salaries, allowances and other perquisites payable to the Vice Chairman shall be the same as that of a Vice Chancellor of a University.

(3) The salaries and allowances payable to the Executive Director shall be the same as that of a Principal Secretary to the Government, if he is a retired officer, and his pay shall be reduced to that of his pension and DCRG. If a serving officer is appointed is not entitled for any salary or allowances.

(4) Subject to the pleasure of the Government, a non-official member shall hold the office for a term of five years or till the expiry of the term of the body represented by him whichever is earlier.

(5) The non-official member shall be eligible for such rate of travelling allowance, daily allowance and sitting fee as may be prescribed.

(6) Subject to the provisions of this section, the other terms and conditions of service of the Vice-Chairman, Executive Director and Members shall be such as may be prescribed.

**12. Removal from Membership of the Council.-** (1) If, at any time, it appears to the Government that a member appointed or nominated has proved himself to be unfit to hold office or has been guilty of misconduct or neglect which in the opinion of the Government renders his removal from the membership of the Council, as expedient, the Government may, after giving such member, a reasonable opportunity of showing cause as to why he shall not be removed from the Council and after examining the same decide whether to continue or remove such member, as the case may be, from his membership and in case of such removal from the membership of the Council it shall be made by notification.

(2) The Vice-Chairman or the Executive Director shall not be removed except by an order of the State Government passed on the ground of willful omission or refusal to carry out the provisions of this Act or Rules or Regulations made there under or for abuse of the powers vested in him after consideration of the report of an inquiry ordered by the State Government in this behalf.

**13. Filling up of casual vacancy.-** If a casual vacancy arises in the office of a nominated or appointed Member, either by reason of his death, resignation, removal or otherwise, such vacancy shall be filled up by the Government by nomination or appointment as the case may be and such Member shall hold office only for the remainder of the term of the Member in whose place he was nominated or appointed.

## CHAPTER-III

## THE EXECUTIVE COMMITTEE

**14. The Executive Committee.-** There shall be an Executive Committee for the Council which shall consist of the following members, namely:-

| | | | |
|---|---|---|---|
| (i) | the Vice-Chairman of the council; | - | Chairman |
| (ii) | the Executive Director; | - | Member-Secretary |
| (iii) | two Vice-Chancellors, nominated by rotation by the Council for a period of one year | - | Members |
| (iv) | four of the ten academicians of repute who are the members of the Council nominated by it by rotation for a period of twenty months | - | Members |
| (v) | the Principal Secretary to Government, Higher Education Department, | - | Ex-officio member |
| (vi) | the Principal Secretary to the Government, Medical Education Department, | - | Ex-officio member |

**15. Powers and functions of the Executive Committee.-** The Executive Committee shall have the following powers and perform the following functions, namely:-

(i) It shall be competent to take decisions on behalf of the Council, subject to the concurrence of the Council in all matters with policy implications:

Provided that in urgent circumstances the Executive Committee may take a decision subject to ratification by the Council;

(ii) It shall incur such expenses as are necessary to fulfill the objectives set out in this Act and carry out all decisions taken by the Council;

(iii) It shall present before the Council the annual academic and financial audit reports of the Council for its approval;

(iv) It shall have such other powers, functions and duties as may be prescribed.

**16. Meetings.-** (1) The meetings of the Executive Committee shall be convened by the Executive Director on the advice of the Chairman.

(2) It shall meet, as often as may be necessary, at such time and place and observe such rules of procedure as may be provided in the regulations provided that it shall meet at least once in three months.

(3) The quorum for the meetings of the Executive Committee shall be one third of the filled up membership in each body and decisions may be taken in the meetings by simple majority of those present and voting.

## CHAPTER-IV

## DIRECTIONS BY THE GOVERNMENT

**17. Directions by the Government.-** On the recommendation of the Council, or suo-moto the Government may, direct any university with such modification as may be necessary to implement the reforms in such manner as may be specified therein. Notwithstanding anything contained in any law for the time being in force, it shall be obligatory on the part of the university to implement the directions given by the Government and to report the action taken to the Government and the council accordingly. The council shall review from time to time the compliance by the universities, of the direction given by the Government.

## CHAPTER-V

## FUNDS OF THE COUNCIL

**18. Funds of the Council.-** (1) The funds of the Council shall include all sums which may, from time to time, be paid to it by the Government and all other receipts including any sum from the Central Government, the University Grants Commission or any other authority, institutions or person.

(2) The Government may pay to the Council every financial year such sums as may be considered necessary for the functioning of the Council and for the discharge of its responsibilities and duties.

(3) All expenditure incurred by the Council under or for the purposes of this Act shall be defrayed from out of the Fund and any surplus remaining, after such expenditure has been met, shall be invested in such manner as may be prescribed.

**19. Annual Accounts and Audit.-** (1) The accounts of the Council shall be maintained in such manner and in such form as may be prescribed.

(2) The Council shall prepare an annual statement of accounts in such form and in such manner as may be prescribed.

(3) The accounts of the Council shall be audited once in a year by such auditor as the Government may appoint in this behalf.

(4) The Executive Director to the Council shall cause the annual audit report to be printed and forward a printed copy thereof to each member and shall place such report before the Governing Council for consideration at its next meeting.

(5) The Council shall take appropriate action forthwith to remedy any defect or irregularity that may be pointed out in the audit report.

6) The accounts of the Council as certified by the auditor together with the audit report along with the remarks of the Council thereon shall be forwarded to the Government within such time as may be prescribed.

(7) The Government shall, as soon as may be after the receipt of the annual accounts together with the audit report under sub-section (6), cause the same to be laid before both the Houses of Legislature.

**20. Annual Report.-** (1) The Council shall prepare for every year a report of its activities under this Act during that year and submit the report to the Government.

(2) The Government shall, as soon as may be after the receipt of a report under sub-section (1), cause the same to be laid before both the Houses of Legislature.

## CHAPTER-VI

## MISCELLANEOUS

**21. Protection of acts done in good faith.-** No suit, prosecution or other legal proceeding shall lie against the Council or any member or officer or employee of the Council for anything which is done or intended to be done in good faith in pursuance of the provisions of this Act or any rules or regulations made there under.

**22. Staff of the Council.-** The Council shall, with prior approval of the Government appoint such officers and staff, as it deems necessary for the discharge of its functions under this Act. The terms and conditions of service of the officers and staff of the Council shall be such as may be specified in the regulations to be framed by the Council.

**23. Members and Staff of the Council to be public servants.-** The Chairman, Vice-Chairman, Members, Officers and Staff of the Council shall be deemed, when acting or purporting to act in pursuance of any of the provisions of this Act or any rule or regulation or order or direction made or issued under this Act shall be deemed to be public servants within the meaning of section 21 of the Indian Penal Code (Central Act 45 of 1860).

**24. Power to make regulations.-** The Council may, with prior approval of the Government, make regulations not inconsistent with the provisions of this Act and rules made thereunder for carrying out all or any of the purposes of this Act.

**25. Power to make rules.-** (1) The Government may by notification make rules, for carrying out all or any of the purposes of this Act.

(2) Every rule made under this Act shall be laid as soon as may be after it is made before each House of the State Legislature while it is in session for a total period of thirty days which may be comprised in one session or in two or more successive sessions, and if, before the expiry of the session immediately following the session or the successive sessions aforesaid, both Houses agree in making any modification in the rule or both Houses agree that the rule should not be made, the rule shall thereafter have effect only in such modified form or be of no effect, as the case may be, so however, that any such modification or annulment shall be without prejudice to the validity of anything previously done under that rule.

**26. Power to remove difficulties.-** (1) If any difficulty arises in giving effect to the provisions of this Act, the Government may, by order, as occasion may require, do anything not inconsistent with the provisions of this Act which appears to them to be necessary or expedient for the purpose of removing the difficulty.

(2) Every order issued under sub-section (1) shall, as soon as may be after it is made be laid before both the Houses of Legislature.

**27. Amendment of Karnataka Act 29 of 2001.-** In the Karnataka State Universities Act, 2000 (Karnataka Act 29 of 2001), section 72 shall be omitted.

